# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಹರ್ಷವರ್ಧನ್ ಬಿ. (ನಂಜನಗೂಡು)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 834

ಉತ್ತರ ದಿನಾಂಕ : 11.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಶುದ್ಧ ಕುಡಿಯುವ ನೀರಿನ ಆರ್.ಓ ಘಟಕಗಳು ಎಷ್ಟು; ಹಾಲಿ ಕೆಟ್ಟು ನಿಂತಿರುವ ಆರ್.ಓ ಘಟಕಗಳು ಎಷ್ಟು; ಈ ರೀತಿ ಕೆಟ್ಟು ನಿಂತಿರುವ ಆರ್.ಓ ಘಟಕಗಳನ್ನು ದುರಸ್ಥಿಗೊಳಿಸಲು ಯಾವಾಗ ಕ್ರಮ ಕೈಗೊಳ್ಳಲಾಗುವುದು; | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ 17164 ನೀರು ಶುದ್ಧೀಕರಣ ಘಟಕಗಳನ್ನು ಅನುಷ್ಠಾನಗೊಳಿಸಿದ್ದು, ಈ ಪೈಕಿ 12391 ನೀರು ಶುದ್ಧೀಕರಣ ಘಟಕಗಳು ಕಾರ್ಯನಿರ್ವಹಿಸುತ್ತಿರುತ್ತವೆ. 4773 ಘಟಕಗಳು ವಿವಿಧ ಕಾರಣಗಳಿಂದ ತಾತ್ಕಾಲಿಕವಾಗಿ ದುರಸ್ತಿಯಲ್ಲಿರುತ್ತವೆ. (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪಂಚತಂತ್ರದ ದಿನಾಂಕ:28.02.2020ರ ಮಾಹಿತಿ ಅನ್ವಯ)<br><br>ಗ್ರಾಮೀಣ ಕುಡಿಯುವ ನೀರು & ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ, ಕೆ.ಆರ್.ಐ.ಡಿ.ಎಲ್.ಸಂಸ್ಥೆ ಮುಖೇನ, ಸಹಕಾರ ಸಂಘ/ಸಂಸ್ಥೆ ಮುಖೇನ ಮತ್ತು ಗ್ರಾಮ ಪಂಚಾಯತಿ ಮಟ್ಟದಲ್ಲಿ ಇತರೆ ಅನುದಾನದಲ್ಲಿ ಅನುಷ್ಠಾನಗೊಳಿಸಿರುವ ಘಟಕಗಳ ಪೈಕಿ, ನಿರ್ವಹಣೆ ಅವಧಿ ಮುಗಿದಿರುವ/ ನಿರ್ವಹಣೆ ಸಮಸ್ಯೆ ಇರುವ 8142 ಘಟಕಗಳಿಗೆ ಟೆಂಡರ್ ಕರೆಯಲಾಗಿದ್ದು, ದಿನಾಂಕ:28.02.2020ರ ಮಾಹಿತಿ ಪ್ರಕಾರ ಅನುಮೋದನೆಯಾದ ಸಂಸ್ಥೆ/ಗುತ್ತಿಗೆದಾರರಿಗೆ 7312 ನೀರು ಶುದ್ಧೀಕರಣ ಘಟಕಗಳನ್ನು ಮುಂದಿನ 5 ವರ್ಷಗಳ ನಿರ್ವಹಣೆಗಾಗಿ ಹಸ್ತಾಂತರ ಮಾಡಲು ಕ್ರಮವಹಿಸಲಾಗಿದೆ. |
| ಆ) | ರಾಜ್ಯದಲ್ಲಿ ಶುದ್ಧ ಕುಡಿಯುವ ನೀರಿನ ಆರ್.ಓ. ಘಟಕಗಳನ್ನು ನಿರ್ವಹಣೆ ಯಾವ ರೀತಿ ಮಾಡಲಾಗುತ್ತಿದೆ; ನಿರ್ವಹಣೆ ಮಾಡಲು ಏಜೆನ್ಸಿಯನ್ನೇನಾದರೂ ನೇಮಿಸಲಾಗಿದೆಯೇ (ವಿವರ ನೀಡುವುದು); | ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರಣ ಘಟಕಗಳನ್ನು ಅನುಮೋದನೆಯಾದ ಸಂಸ್ಥೆ / ಗುತ್ತಿಗೆದಾರರೇ 5 ವರ್ಷಗಳ ಅವಧಿಯವರೆಗೆ ನಿರ್ವಹಣೆ ಮಾಡಬೇಕಾಗಿರುತ್ತದೆ.<br><br>ಸಹಕಾರ ಸಂಘ / ಸಂಸ್ಥೆ ಮುಖೇನ ಅನುಷ್ಠಾನಗೊಳಿಸಿರುವ ನೀರು ಶುದ್ಧೀಕರಣ ಘಟಕಗಳನ್ನು ಸಹಕಾರ ಸಂಸ್ಥೆಯವರೇ ಅನುಷ್ಠಾನಗೊಳಿಸಿ, ನಿರ್ವಹಣೆ ಮಾಡಬೇಕಾಗಿರುತ್ತದೆ.<br><br>ಕೆ.ಆರ್.ಐ.ಡಿ.ಎಲ್. ಸಂಸ್ಥೆಯಿಂದ ಇತರೆ ಅನುದಾನದಲ್ಲಿ (MPLAD/ MLALAD / ZP/TP/GP/CSR/HKRDB/Others) ನಿರ್ಮಿಸಿರುವ ಘಟಕಗಳ ವಾರ್ಷಿಕ ನಿರ್ವಹಣೆಯು ಮುಕ್ತಾಯಗೊಂಡಿದ್ದು, ಸದರಿ ಘಟಕಗಳ ನಿರ್ವಹಣೆಗಾಗಿ ಟೆಂಡರ್ ಕರೆದು, ಅನುಮೋದನೆಯಾದ ಸಂಸ್ಥೆಯೊಂದಿಗೆ ಕರಾರು ಮಾಡಿಕೊಂಡು, ಮುಂದಿನ 5 ವರ್ಷಗಳ ಅವಧಿಯವರೆಗೆ ನಿರ್ವಹಣೆಗಾಗಿ ಘಟಕಗಳನ್ನು ಹಸ್ತಾಂತರ ಮಾಡಲು ಕ್ರಮವಹಿಸಲಾಗಿದೆ. |
| ಇ) | ಹೊಸದಾಗಿ ಶುದ್ಧ ಕುಡಿಯುವ ನೀರಿನ ಆರ್.ಓ. ಘಟಕಗಳನ್ನು ಪ್ರಾರಂಭಿಸುವ ಉದ್ದೇಶ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವಾಗ ಪ್ರಾರಂಭಿಸಲಾಗುವುದು? | ರಾಜ್ಯದ ಗ್ರಾಮೀಣ ಜನವಸತಿಗಳಲ್ಲಿ ಹೊಸದಾಗಿ ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲು ನೀರು ಕಲುಷಿತ ಹೊಂದಿರುವ ಜನವಸತಿಗಳಲ್ಲಿ ಮಾತ್ರ ನೀರು ಶುದ್ಧೀಕರಣ ಘಟಕಗಳನ್ನು ಅಳವಡಿಸಲು ಕ್ರಮವಹಿಸಲಾಗುತ್ತಿದೆ. |

ಸಂ:ಗ್ರಾಕುನೀ&ನೈಇ 63 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು



ಕರ್ನಾಟಕ ಸರ್ಕಾರ


**ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ**

ಆಯುಕ್ತರವರ ಕಛೇರಿ ಗ್ರಾ.ಕುನೀ.ಸ.ನೈ.ಇ., 2ನೇ ಮಹಡಿ, "ಇ" ಬ್ಲಾಕ್, ಕೆಹೆಚ್‌ಬಿ ಕಟ್ಟಡ,
ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು–560009. ☎:080–22240508 📠:22240509

ಇ–ಮೇಲ್: krwssd@gmail.com


ಸಂ:ಗ್ರಾಕುನೀ&ನೈಇ 62 ಗ್ರಾನೀಸ(5)2020 ದಿನಾಂಕ:10.03.2020

172
11/03/2020

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು–01.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಸುರೇಶ್ ಗೌಡ (ನಾಗಮಂಗಲ)** ಇವರ **ಚುಕ್ಕೆ ರಹಿತ ಪ್ರಶ್ನೆ ಸಂ:833ಕ್ಕೆ** ಸಂಬಂಧಿಸಿದ ಮೇಲಿನ ಕ್ರಮ / ವಾಸ್ತವಿಕ ವರದಿಯ ಉತ್ತರ ನೀಡುವ ಬಗ್ಗೆ.

--

ಮೇಲೆ ತಿಳಿಸಿದ ಪ್ರಶ್ನೆಗೆ ಸಂಬಂಧಿಸಿದ **100** ಪ್ರತಿಗಳನ್ನು ತಮ್ಮ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

ಕೆ.ವಿ. [signature] 10/03/2020
ಪತ್ರಾಂಕಿತ ವ್ಯವಸ್ಥಾಪಕರು
ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ

**ಪ್ರತಿ:**
1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿರವರಿಗೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆರವರ ಆಪ್ತ ಕಾರ್ಯದರ್ಶಿರವರಿಗೆ

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಸುರೇಶ್ ಗೌಡ(ನಾಗಮಂಗಲ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 833

ಉತ್ತರ ದಿನಾಂಕ : 11.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮದ್ದೂರು ತಾಲ್ಲೂಕು ದೇಸಿಹಳ್ಳಿ ಕೆರೆಯಿಂದ 38 ಗ್ರಾಮಗಳಿಗೆ ಬಹುಗ್ರಾಮ ಕುಡಿಯುವ ನೀರಿನ ಯೋಜನೆಗೆ ಯಾವ ವರ್ಷ ಸರ್ಕಾರದಿಂದ ಅನುಮೋದನೆ ನೀಡಲಾಗಿದೆ; | ಮದ್ದೂರು ತಾಲ್ಲೂಕು ಬೆಸಗರಹಳ್ಳಿ ಮತ್ತು ಇತರೆ 37 ಗ್ರಾಮಗಳ ಕುಡಿಯುವ ನೀರಿನ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 73 ಗ್ರಾನೀಸ(5)2017 ಬೆಂಗಳೂರು ದಿನಾಂಕ:04.02.2019ರಲ್ಲಿ ಪರಿಷ್ಕೃತ ಮೊತ್ತ ರೂ.3471.55ಲಕ್ಷಗಳಿಗೆ ಅನುಮೋದನೆ ನೀಡಲಾಗಿರುತ್ತದೆ. |
| ಆ) | ಈ ಯೋಜನೆಯ ಮೂಲ ಅಂದಾಜು ಮೊತ್ತವೆಷ್ಟು; ಇದಕ್ಕೆ ನೀಡಲಾಗಿರುವ ಗುತ್ತಿಗೆ ದರವೆಷ್ಟು; | ಈ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 36 ಗ್ರಾನೀಸ(5)14 ದಿನಾಂಕ:26.02.2014ರಲ್ಲಿ ರೂ.2465.00ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.<br><br>ದಿನಾಂಕ:21.10.2015ರಂದು ಟೆಂಡರ್ ಆಹ್ವಾನಿಸಲಾಗಿ ಒಬ್ಬ ಗುತ್ತಿಗೆದಾರರು ಭಾಗವಹಿಸಿದ ಟೆಂಡರನ್ನು ಆರ್ಥಿಕ ಇಲಾಖೆಯ ಸಹಮತಿಗೆ ಸಲ್ಲಿಸಲಾಗಿತ್ತು, ದಿನಾಂಕ:08.12.2017 ಮತ್ತು ದಿನಾಂಕ:06.02.2018ರಲ್ಲಿ ಆರ್ಥಿಕ ಇಲಾಖೆಯು ಪ್ರಸ್ತಾವನೆಯನ್ನು ಮುಂದೂಡಲು ಸೂಚಿಸಿದ್ದರು. ನಂತರ ದಿನಾಂಕ:14.01.2019ರಲ್ಲಿ ಸಹಮತಿ ನೀಡಿದ್ದರಿಂದ ಸಚಿವ ಸಂಪುಟದಲ್ಲಿ ಮಂಡಿಸಿ ಅನುಮೋದನೆ ಪಡೆಯಲಾಗಿರುತ್ತದೆ.<br><br>ಗುತ್ತಿಗೆದಾರರೊಂದಿಗೆ ರೂ.3110.24ಲಕ್ಷಗಳಿಗೆ ಕರಾರು ಒಪ್ಪಂದ ಮಾಡಿಕೊಳ್ಳಲಾಗಿದೆ. |
| ಇ) | ಕರಾರಿನ ಪ್ರಕಾರ ಕಾಮಗಾರಿಯನ್ನು ಯಾವ ವರ್ಷ ಪೂರ್ಣಗೊಳಿಸಬೇಕಾಗಿತ್ತು; | ಕರಾರಿನ ಪ್ರಕಾರ ಕಾಮಗಾರಿಯನ್ನು ದಿನಾಂಕ:06.03.2020ರಲ್ಲಿ ಪೂರ್ಣಗೊಳಿಸಬೇಕಾಗಿರುತ್ತದೆ. |
| ಈ | ಗುತ್ತಿಗೆದಾರರು ಪೂರ್ಣಗೊಳಿಸಿರುವ ಹಾಗು ಬಾಕಿ ಉಳಿಸಿಕೊಂಡಿರುವ ಕಾಮಗಾರಿಗಳೆಷ್ಟು (ವಿವರ ನೀಡುವುದು); | ಗುತ್ತಿಗೆದಾರರು Pure water rising main, Pure water gravity main, MBT at Gollardoddi, Haralahalli and Chottanahalli ಕಾಮಗಾರಿಗಳನ್ನು ಪೂರ್ಣಗೊಳಿಸಿದ್ದು, Jackwell, Water treatment plant ಹಾಗೂ Electrification ಕಾಮಗಾರಿಗಳು ಬಾಕಿ ಉಳಿದಿರುತ್ತದೆ. |
| ಉ) | ಬಾಕಿ ಉಳಿಸಿಕೊಂಡಿರುವ ಗುತ್ತಿಗೆದಾರರ ವಿರುದ್ಧ ಸರ್ಕಾರ ಯಾವ ಕ್ರಮ ಜರುಗಿಸಲಿದೆ? | ಸ್ಥಳದ ಸಮಸ್ಯೆಯಿಂದಾಗಿ ಕಾಮಗಾರಿಯನ್ನು ಪೂರ್ಣಗೊಳಿಸಲು ವಿಳಂಬವಾಗಿರುತ್ತದೆ. ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

ಸಂ:ಗ್ರಾಕುನೀ&ನೈಇ 63 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಸುರೇಶ್ ಗೌಡ(ನಾಗಮಂಗಲ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 833

ಉತ್ತರ ದಿನಾಂಕ : 11.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮದ್ದೂರು ತಾಲ್ಲೂಕು ದೇಸಿಹಳ್ಳಿ ಕೆರೆಯಿಂದ 38 ಗ್ರಾಮಗಳಿಗೆ ಬಹುಗ್ರಾಮ ಕುಡಿಯುವ ನೀರಿನ ಯೋಜನೆಗೆ ಯಾವ ವರ್ಷ ಸರ್ಕಾರದಿಂದ ಅನುಮೋದನೆ ನೀಡಲಾಗಿದೆ; | ಮದ್ದೂರು ತಾಲ್ಲೂಕು ಬೆಸಗರಹಳ್ಳಿ ಮತ್ತು ಇತರೆ 37 ಗ್ರಾಮಗಳ ಕುಡಿಯುವ ನೀರಿನ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 73 ಗ್ರಾನೀಸ(5)2017 ಬೆಂಗಳೂರು ದಿನಾಂಕ:04.02.2019ರಲ್ಲಿ ಪರಿಷ್ಕೃತ ಮೊತ್ತ ರೂ.3471.55ಲಕ್ಷಗಳಿಗೆ ಅನುಮೋದನೆ ನೀಡಲಾಗಿರುತ್ತದೆ. |
| ಆ) | ಈ ಯೋಜನೆಯ ಮೂಲ ಅಂದಾಜು ಮೊತ್ತವೆಷ್ಟು; ಇದಕ್ಕೆ ನೀಡಲಾಗಿರುವ ಗುತ್ತಿಗೆ ದರವೆಷ್ಟು; | ಈ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 36 ಗ್ರಾನೀಸ(5)14 ದಿನಾಂಕ:26.02.2014ರಲ್ಲಿ ರೂ.2465.00ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.<br><br>ದಿನಾಂಕ:21.10.2015ರಂದು ಟೆಂಡರ್ ಆಹ್ವಾನಿಸಲಾಗಿ ಒಬ್ಬ ಗುತ್ತಿಗೆದಾರರು ಭಾಗವಹಿಸಿದ ಟೆಂಡರನ್ನು ಆರ್ಥಿಕ ಇಲಾಖೆಯ ಸಹಮತಿಗೆ ಸಲ್ಲಿಸಲಾಗಿತ್ತು. ದಿನಾಂಕ:08.12.2017 ಮತ್ತು ದಿನಾಂಕ:06.02.2018ರಲ್ಲಿ ಆರ್ಥಿಕ ಇಲಾಖೆಯು ಪ್ರಸ್ತಾವನೆಯನ್ನು ಮುಂದೂಡಲು ಸೂಚಿಸಿದ್ದರು. ನಂತರ ದಿನಾಂಕ:14.01.2019ರಲ್ಲಿ ಸಹಮತಿ ನೀಡಿದ್ದರಿಂದ ಸಚಿವ ಸಂಪುಟದಲ್ಲಿ ಮಂಡಿಸಿ ಅನುಮೋದನೆ ಪಡೆಯಲಾಗಿರುತ್ತದೆ.<br><br>ಗುತ್ತಿಗೆದಾರರೊಂದಿಗೆ ರೂ.3110.24ಲಕ್ಷಗಳಿಗೆ ಕರಾರು ಒಪ್ಪಂದ ಮಾಡಿಕೊಳ್ಳಲಾಗಿದೆ. |
| ಇ) | ಕರಾರಿನ ಪ್ರಕಾರ ಕಾಮಗಾರಿಯನ್ನು ಯಾವ ವರ್ಷ ಪೂರ್ಣಗೊಳಿಸಬೇಕಾಗಿತ್ತು; | ಕರಾರಿನ ಪ್ರಕಾರ ಕಾಮಗಾರಿಯನ್ನು ದಿನಾಂಕ:06.03.2020ರಲ್ಲಿ ಪೂರ್ಣಗೊಳಿಸಬೇಕಾಗಿರುತ್ತದೆ. |
| ಈ | ಗುತ್ತಿಗೆದಾರರು ಪೂರ್ಣಗೊಳಿಸಿರುವ ಹಾಗು ಬಾಕಿ ಉಳಿಸಿಕೊಂಡಿರುವ ಕಾಮಗಾರಿಗಳೆಷ್ಟು (ವಿವರ ನೀಡುವುದು); | ಗುತ್ತಿಗೆದಾರರು Pure water rising main, Pure water gravity main, MBT at Gollardoddi, Haralahalli and Chottanahalli ಕಾಮಗಾರಿಗಳನ್ನು ಪೂರ್ಣಗೊಳಿಸಿದ್ದು, Jackwell, Water treatment plant ಹಾಗೂ Electrification ಕಾಮಗಾರಿಗಳು ಬಾಕಿ ಉಳಿದಿರುತ್ತದೆ. |
| ಉ) | ಬಾಕಿ ಉಳಿಸಿಕೊಂಡಿರುವ ಗುತ್ತಿಗೆದಾರರ ವಿರುದ್ಧ ಸರ್ಕಾರ ಯಾವ ಕ್ರಮ ಜರುಗಿಸಲಿದೆ? | ಸ್ಥಳದ ಸಮಸ್ಯೆಯಿಂದಾಗಿ ಕಾಮಗಾರಿಯನ್ನು ಪೂರ್ಣಗೊಳಿಸಲು ವಿಳಂಬವಾಗಿರುತ್ತದೆ. ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

ಸಂ:ಗ್ರಾಕುನೀ&ನೈಇ 63 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು



ಕರ್ನಾಟಕ ಸರ್ಕಾರ

**ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ**

ಆಯುಕ್ತರವರ ಕಛೇರಿ ಗ್ರಾ.ಕುನೀ.ಸ.ನೈ.ಇ., 2ನೇ ಮಹಡಿ, "ಇ" ಬ್ಲಾಕ್, ಕೆಹೆಚ್‌ಬಿ ಕಟ್ಟಡ,
ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು-560009. ☎:080-22240508 📠:22240509

ಇ-ಮೇಲ್: krwssd@gmail.com

ಸಂ:ಗ್ರಾಕುನೀ&ನೈಇ 68 ಗ್ರಾನೀಸ(5)2020 ದಿನಾಂಕ:09.03.2020

(13)
11/03/2020

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು-01.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಡಾ॥ ಅಜಯ್ ಧರ್ಮಸಿಂಗ್ (ಜೇವರ್ಗಿ)** ಇವರ **ಚುಕ್ಕೆರಹಿತ ಪ್ರಶ್ನೆ ಸಂ:1345ಕ್ಕೆ** ಸಂಬಂಧಿಸಿದ ಮೇಲಿನ ಕ್ರಮ / ವಾಸ್ತವಿಕ ವರದಿಯ ಉತ್ತರ ನೀಡುವ ಬಗ್ಗೆ.

--

ಮೇಲೆ ತಿಳಿಸಿದ ಪ್ರಶ್ನೆಗೆ ಸಂಬಂಧಿಸಿದ **100** ಪ್ರತಿಗಳನ್ನು ತಮ್ಮ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)
ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ

**ಪ್ರತಿ:**
1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿರವರಿಗೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆರವರ ಆಪ್ತ ಕಾರ್ಯದರ್ಶಿರವರಿಗೆ

# ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಡಾ॥ ಅಜಯ್ ಧರ್ಮ ಸಿಂಗ್ (ಜೇವರ್ಗಿ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1345

ಉತ್ತರ ದಿನಾಂಕ : 11.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹೊಸ ಯಡ್ರಾಮಿ ತಾಲ್ಲೂಕಿನಲ್ಲಿ ಶಾಶ್ವತ ಕುಡಿಯುವ ನೀರಿನ ಸಮಸ್ಯೆಯ ಪರಿಹಾರಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಯಡ್ರಾಮಿ ತಾಲ್ಲೂಕು ಒಳಗೊಂಡಂತೆ ಕಲಬುರಗಿ ಜಿಲ್ಲೆಯ ಎಲ್ಲಾ ಗ್ರಾಮೀಣ ಜನವಸತಿಗಳಿಗೆ ಕುಡಿಯುವ ನೀರು ಯೋಜನೆಯನ್ನು ಜಾರಿಗೊಳಿಸಲು ಸಮಗ್ರ ಯೋಜನೆಯನ್ನು ತಯಾರಿಸಲು ಸೂಚಿಸಿದೆ. ಸಮಗ್ರ ಯೋಜನೆಯನ್ವಯ ಮತ್ತು ಅನುದಾನ ಲಭ್ಯತೆಯಾನುಸಾರ ಕ್ರಮಕೈಗೊಳ್ಳಲಾಗುವುದು. |
| ಆ) | ಜೇವರ್ಗಿ ತಾಲ್ಲೂಕಿನಲ್ಲಿ ಬೇಸಿಗೆಯಲ್ಲಿ ತೀವ್ರ ಕುಡಿಯುವ ನೀರಿನ ಸಮಸ್ಯೆಯ ಶಾಶ್ವತ ಪರಿಹಾರಕ್ಕಾಗಿ ಸರ್ಕಾರದ ಕ್ರಮವೇನು; | |
| ಇ) | ಹಿಂದಿನ ವರ್ಷದಲ್ಲಿ ಟ್ಯಾಂಕರ್ ಮೂಲಕ ನೀರು ಸರಬರಾಜು ಮಾಡಿರುವುದಕ್ಕೆ ಸರ್ಕಾರದಿಂದ ಎಷ್ಟು ಹಣ ಖರ್ಚಾಗಿದೆ (ವಿವರ ನೀಡುವುದು); | ಹಿಂದಿನ ವರ್ಷದಲ್ಲಿ ಜೇವರ್ಗಿ ತಾಲ್ಲೂಕಿನ ಗ್ರಾಮೀಣ ಭಾಗದ ಜನವಸತಿಗಳಿಗೆ ಟ್ಯಾಂಕರ್ ಹಾಗೂ ಬಾಡಿಗೆ ಜಲಮೂಲಗಳ ಮೂಲಕ ಕುಡಿಯುವ ನೀರಿನ ಸರಬರಾಜಿಗಾಗಿ ಕಂದಾಯ ಇಲಾಖೆಯಿಂದ ರೂ.1.30ಕೋಟಿ ಮೊತ್ತ ಖರ್ಚಾಗಿರುತ್ತದೆ. |
| ಈ) | ಯಡ್ರಾಮಿ ಪಟ್ಟಣದಲ್ಲಿರುವ ಪುರಾತನ ಕಾಲದ ಬಾವಿಗಳನ್ನು ರಿಪೇರಿ ಮಾಡುವ ಹಾಗೂ ಕಾಲುವೆ ಮೂಲಕ ನೀರು ತುಂಬಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಸರ್ಕಾರದ ಕ್ರಮವೇನು (ವಿವರ ನೀಡುವುದು) ? | ಯಡ್ರಾಮಿ ಪಟ್ಟಣದಲ್ಲಿರುವ ಪುರಾತನ ಕಾಲದ ಬಾವಿಗಳನ್ನು ರಿಪೇರಿ ಮಾಡುವ ಹಾಗೂ ಕಾಲುವೆ ಮೂಲಕ ನೀರು ತುಂಬಿಸುವ ಪ್ರಸ್ತಾವನೆಯು ಬಂದಿರುವುದಿಲ್ಲ. |

ಸಂ:ಗ್ರಾಕುನೀ&ನೈಇ 68 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಗ್ರಾಅಪಂರಾ 148 ಜಿಪಸ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:10-03-2020.

54
4/5
11/03/20

ಇವರಿಂದ:

**ಸರ್ಕಾರದ ಪ್ರಧಾನ ಕಾರ್ಯದರ್ಶಿ(ಪಂ.ರಾಜ್)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ,
**ಬಹುಮಹಡಿ ಕಟ್ಟಡ, ಬೆಂಗಳೂರು.**

ಇವರಿಗೆ:

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ
**ವಿಧಾನ ಸೌಧ.**

ಮಾನ್ಯರೆ,

**ವಿಷಯ:** ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್(ಸಾಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1193ಕ್ಕೆ ಉತ್ತರಿಸುವ ಬಗ್ಗೆ.

*****

ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್(ಸಾಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1193ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

10/03/2020
(ಸಿ. ಮಂಜೂಳ)
ಸರ್ಕಾರದ ಅಧೀನ ಕಾರ್ಯದರ್ಶಿ(ಜಿ.ಪಂ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

10/3/2020

ಪ್ರತಿ:

1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳ ಮಾಹಿತಿಗಾಗಿ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ(ಪಂ.ರಾಜ್), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆರವರ ಆಪ್ತ ಕಾರ್ಯದರ್ಶಿಗಳು.
3. ಸರ್ಕಾರದ ಅಧೀನ ಕಾರ್ಯದರ್ಶಿ(ಸಮನ್ವಯ) ಗ್ರಾಅಪ ಇಲಾಖೆ.

# ಕರ್ನಾಟಕ ವಿಧಾನ ಸಭೆ
## 15ನೇ ವಿಧಾನ ಸಭೆ
## 6ನೇ ಅಧಿವೇಶನ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1193 |
| ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಹಾಲಪ್ಪ ಹರತಾಳ್ ಹೆಚ್ (ಸಾಗರ) |
| ಉತ್ತರಿಸುವ ದಿನಾಂಕ | : | 11-03-2020 |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಜಿಲ್ಲಾ ಪಂಚಾಯತ್ ಅಭಿವೃದ್ಧಿ ಅನುದಾನ ಹಾಗೂ ತಾಲ್ಲೂಕು ಪಂಚಾಯತಿ ಅನಿರ್ಬಂಧಿತ ಅನುದಾನಗಳ ಮಾರ್ಗಗಳ ಅನುಸೂಚಿ ಗಳನ್ವಯ ಗ್ರಾಮಗಳಲ್ಲಿ ದ್ವಾರಬಾಗಿಲು, ಸಮುದಾಯ ಭವನ, ಬಸ್ ನಿಲ್ದಾಣ, ರಂಗಮಂದಿರ ನಿರ್ಮಾಣ ಹಾಗೂ ದುರಸ್ಥಿಗಳಿಗೆ ಅನುದಾನವನ್ನು ಕೈಗೆತ್ತಿಕೊಳ್ಳಬಾರದೆಂದು ಆದೇಶ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| (ಆ) | ಇದರಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಬಸ್ ನಿಲ್ದಾಣ, ಸಮುದಾಯ ಭವನ, ರಂಗಮಂದಿರಗಳ ದುರಸ್ಥಿಗೆ ತೊಂದರೆ ಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |

| | | |
|---|---|---|
| (ಇ) | ಸದರಿ ಅನುದಾನವನ್ನು ನಿರ್ಮಾಣ ಮತ್ತು ದುರಸ್ತಿಗಳಿಗೆ ವಿನಿಯೋಗಿಸಲು ಇರುವ ತೊಂದರೆಗಳೇನು; | ಸರ್ಕಾರವು ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಅನುದಾನಗಳ ಬಳಕೆಯ ಬಗ್ಗೆ ಮಾರ್ಗಸೂಚಿಗಳನ್ನು ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 75 ಜಿಪಸ 2013, ದಿನಾಂಕ: 17-07-2013ರಲ್ಲಿ ಜಿಲ್ಲಾ ಪಂಚಾಯತ್ ಅನುದಾನಕ್ಕೆ ಮತ್ತು ಗ್ರಾಅಪ 76 ಜಿಪಸ 2013, ದಿನಾಂಕ:17-07-2013ರಲ್ಲಿ ತಾಲ್ಲೂಕು ಪಂಚಾಯತಿ ಅನುದಾನಕ್ಕೆ ಮಾರ್ಗಸೂಚಿಯನ್ನು ಹೊರಡಿಸಿದೆ. ಈ ಮಾರ್ಗಸೂಚಿಯ ಮೂಲ ಉದ್ದೇಶ ಗ್ರಾಮೀಣ ಪ್ರದೇಶದ ಜನರ ಜೀವನ ಮಟ್ಟವನ್ನು ಹೆಚ್ಚಿಸಲು ಅನುಕೂಲವಾಗುವಂತಹ ಕ್ಷೇತ್ರಗಳಾದ ಕುಡಿಯುವ ನೀರು, ನೈರ್ಮಲ್ಯ, ಶಿಕ್ಷಣ, ಆರೋಗ್ಯ, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಪೌಷ್ಠಿಕಾಂಶ ಹಾಗೂ ಶಾಲಾಭಿವೃದ್ಧಿ ಆಗಿರುತ್ತದೆ. ಈ ಅನುದಾನವು ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸಿನ ಆಧಾರದ ಮೇಲೆ ನೀಡಲಾಗುತ್ತಿದ್ದು, ಆಸ್ತಿ ಸೃಷ್ಠಿಗೆ ಹೆಚ್ಚಿನ ಒತ್ತನ್ನು ನೀಡಲಾಗಿದೆ. ಮೇಲಾಗಿ ದ್ವಾರಬಾಗಿಲು ಮತ್ತು ಸಮುದಾಯ ಭವನದಂತಹ ಕಾಮಗಾರಿಗಳು ಜಿಲ್ಲಾ ಪಂಚಾಯತ್ ಅಥವಾ ತಾಲ್ಲೂಕು ಪಂಚಾಯತಿಗೆ ಕ್ರಮವಾಗಿ ಪ್ರಕರಣ 184 ಮತ್ತು 145 ಪ್ರಕಾರ್ಯಗಳಲ್ಲಿ ಸೇರಿರುವುದಿಲ್ಲ. ಆದ್ದರಿಂದ, ಇಂತಹ ಕಾರ್ಯಕ್ರಮಗಳನ್ನು ಅನಿರ್ಬಂಧಿತ ಅನುದಾನಗಳಲ್ಲಿ ತೆಗೆದುಕೊಳ್ಳಲು ಬರುವುದಿಲ್ಲ. ಬಸ್ ನಿಲ್ದಾಣಗಳನ್ನು ಗ್ರಾಮ ಪಂಚಾಯತಿಗಳು ತನ್ನ ಅನುದಾನದಲ್ಲಿ ತೆಗೆದುಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಮೇಲಾಗಿ ಕ್ರಮ ಸಂಖ್ಯೆ(ಅ)ರಲ್ಲಿ ತಿಳಿಸಿರುವ ಕಾಮಗಾರಿಗಳಿಗೆ ತನ್ನದೇ ಆದ ಲೆಕ್ಕ ಶೀರ್ಷಿಕೆಗಳಿದ್ದು, ಅದರಡಿಯಲ್ಲಿ ಬರುವಂತಹ ಅನುದಾನವನ್ನು ಆ ಮಾರ್ಗಸೂಚಿಗಳಿಗೆ ಅನುಸಾರವಾಗಿ ವೆಚ್ಚ ಮಾಡತಕ್ಕದ್ದು. |
| (ಈ) | ಈ ಬಗ್ಗೆ ಕೈಗೊಂಡ ಕ್ರಮಗಳೇನು? (ಪೂರ್ಣ ವಿವರ ಒದಗಿಸುವುದು) | ಉದ್ಭವಿಸುವುದಿಲ್ಲ. |

**ಸಂಖ್ಯೆ:ಗ್ರಾಅಪಂರಾ 148 ಜಿಪಸ 2020**

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.



ಕರ್ನಾಟಕ ಸರ್ಕಾರ
## ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ
ಆಯುಕ್ತರವರ ಕಛೇರಿ ಗ್ರಾ.ಕುನೀ.ಸ.ನೈ.ಇ., 2ನೇ ಮಹಡಿ, "ಇ" ಬ್ಲಾಕ್, ಕೆಹೆಚ್‌ಬಿ ಕಟ್ಟಡ,
ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು-560009. ☎:080-22240508 📠:22240509
ಇ-ಮೇಲ್: krwssd@gmail.com

ಸಂ:ಗ್ರಾಕುನೀ&ನೈಇ 71 ಗ್ರಾನೀಸ(5)2020 ದಿನಾಂಕ:09.03.2020

143
11/03/2020

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು-01.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆರಹಿತ ಪ್ರಶ್ನೆ ಸಂ:1396ಕ್ಕೆ** ಸಂಬಂಧಿಸಿದ ಮೇಲಿನ ಕ್ರಮ / ವಾಸ್ತವಿಕ ವರದಿಯ ಉತ್ತರ ನೀಡುವ ಬಗ್ಗೆ.

--

ಮೇಲೆ ತಿಳಿಸಿದ ಪ್ರಶ್ನೆಗೆ ಸಂಬಂಧಿಸಿದ **100** ಪ್ರತಿಗಳನ್ನು ತಮ್ಮ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)
ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ

**ಪ್ರತಿ:**
1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿರವರಿಗೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆರವರ ಆಪ್ತ ಕಾರ್ಯದರ್ಶಿರವರಿಗೆ

## ಕರ್ನಾಟಕ ವಿಧಾನಸಭೆ

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ (ಬಸವನ ಬಾಗೇವಾಡಿ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1396

ಉತ್ತರ ದಿನಾಂಕ : 11.03.2020.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ಗ್ರಾಮಗಳಿಗೆ ಸಮರ್ಪಕವಾಗಿ ಕುಡಿಯುವ ನೀರು ಒದಗಿಸಲು ಜಲಧಾರೆ ಯೋಜನೆಯನ್ನು ರೂಪಿಸಲಾಗಿದೆಯೇ; | ರೂಪಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಜಲಧಾರೆ ಯೋಜನೆಯ ಅನುಷ್ಠಾನಕ್ಕೆ ಇದುವರೆಗೂ ಕೈಗೊಂಡಿರುವ ಕ್ರಮಗಳೇನು; | ಜಲಧಾರೆ ಯೋಜನೆಯಡಿಯಲ್ಲಿ ವಿಜಯಪುರ ಜಿಲ್ಲೆಯ ಎಲ್ಲಾ ತಾಲ್ಲೂಕುಗಳ ಜನವಸತಿಗಳಿಗೆ ತಲಾ 85 ಎಲ್.ಪಿ.ಸಿ.ಡಿ ಯಂತೆ ಕುಡಿಯುವ ನೀರು ಪೂರೈಸಲು ಯೋಜನೆಯನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ ಹಾಗೂ ಕೆಲವು ನಗರ ಪ್ರದೇಶಗಳಿಗೂ ಸಹ ಕುಡಿಯುವ ನೀರನ್ನು ಪೂರೈಸಲು ಉದ್ದೇಶಿಸಲಾಗಿದೆ.<br>ವಿಜಯಪುರ ಜಿಲ್ಲೆಯ ಯೋಜನೆಗೆ AIIB (Asian Infrastructure Investment Bank) ರವರಿಂದ ಬಾಹ್ಯ ನೆರವನ್ನು ಪಡೆಯಲು ಭಾರತ ಸರ್ಕಾರದ ಆರ್ಥಿಕ ವ್ಯವಹಾರ ಇಲಾಖೆರವರಿಂದ ತಾತ್ವಿಕ ಒಪ್ಪಿಗೆ ಪಡೆಯಲಾಗಿದೆ. ಈ ನಿಟ್ಟಿನಲ್ಲಿ AIIB ರವರೊಂದಿಗೆ ವಿವಿಧ ಹಂತದಲ್ಲಿ ಚರ್ಚೆಗಳನ್ನು ನಡೆಸಲಾಗಿದೆ. ಪ್ರಾಥಮಿಕ ಯೋಜನಾ ವರದಿಯನ್ನು (PSR) ತಯಾರಿಸಿ AIIB ರವರೊಂದಿಗೆ ಹಂಚಿಕೊಳ್ಳಲಾಗಿದೆ. ಯೋಜನೆಯನ್ನು ಸಚಿವ ಸಂಪುಟದ ಅನುಮೋದನೆ ಪಡೆಯಲು ಕ್ರಮ ವಹಿಸಲಾಗಿದೆ. |
| ಇ) | ವಿಜಯಪುರ ಜಿಲ್ಲೆಯಲ್ಲಿ ಜಲಧಾರೆ ಯೋಜನೆಯನ್ನು ಯಾವಾಗ ಅನುಷ್ಠಾನಗೊಳಿಸಲಾಗುವುದು; | ಈ ಯೋಜನೆಗೆ ಅಗತ್ಯವಿರುವ ಹಣಕಾಸಿನ ಬಾಹ್ಯ ನೆರವನ್ನು AIIB (Asian Infrastructure Investment Bank) ರವರಿಂದ ಪಡೆಯಲು ಉದ್ದೇಶಿಸಿ ಚರ್ಚೆಗಳನ್ನು ನಡೆಸಲಾಗಿದೆ. AIIB ರವರು ಈ ಯೋಜನೆಗೆ ಆರ್ಥಿಕ ನೆರವು ನೀಡಲು ಬ್ಯಾಂಕ್‌ರವರು ಜುಲೈ-2020ರ ಮಂಡಳಿ ಸಭೆಯಲ್ಲಿ ಮಂಡಿಸಲು ಯೋಜಿಸಲಾಗಿದೆ. AIIB ರವರು ಅನುಮೋದನೆ ನೀಡಿದ ನಂತರ, ಆಡಳಿತಾತ್ಮಕ ಅನುಮೋದನೆ ಹಾಗೂ ಮುಂದಿನ ಕ್ರಮ ಕೈಗೊಳ್ಳಲಾಗುವುದು. |
| ಈ) | ಈ ಯೋಜನೆಯ ಅನುಷ್ಠಾನಕ್ಕೆ ತಗಲುವ ವೆಚ್ಚ ಎಷ್ಟು; | ಈ ಯೋಜನೆಗೆ ಅಂದಾಜು ರೂ.2703.00ಕೋಟಿಗಳಾಗುತ್ತದೆ. ಇದರಲ್ಲಿ ಯೋಜನೆ ನಿರ್ಮಾಣ ಮತ್ತು 5 ವರ್ಷಗಳ ಕಾರ್ಯಾಚರಣೆ ಮತ್ತು ನಿರ್ವಹಣೆ ಸಹ ಒಳಗೊಂಡಿರುತ್ತದೆ. |
| ಉ) | ಯಾವ ಆರ್ಥಿಕ ಮೂಲದಿಂದ ಅನುದಾನವನ್ನು ಭರಿಸಲಾಗುವುದು? | ಈ ಯೋಜನೆಗೆ ಅಗತ್ಯವಿರುವ ಹಣಕಾಸಿನ ಬಾಹ್ಯ ನೆರವನ್ನು AIIB (Asian Infrastructure Investment Bank) ರವರಿಂದ ರೂ.1806.00ಕೋಟಿಗಳು ಮತ್ತು ರಾಜ್ಯ ಸರ್ಕಾರದಿಂದ ರೂ.897.00ಕೋಟಿಗಳ ಅನುದಾನದೊಂದಿಗೆ ಕೈಗೊಳ್ಳಲು ಉದ್ದೇಶಿಸಿದೆ ಹಾಗೂ ನಗರಾಭಿವೃದ್ಧಿ ಇಲಾಖೆಯ ಸಹಮತಿ ಕೋರಲಾಗಿದೆ. |

ಸಂ:ಗ್ರಾಕುನೀ&ನೈಇ 71 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಕಸಂವಾ 23 ಕವಿಸ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:10-3-2020.

ಇಂದ:-

ಸರ್ಕಾರದ ಕಾರ್ಯದರ್ಶಿಗಳು,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ,
ಬೆಂಗಳೂರು.

ಇವರಿಗೆ:-

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ / ~~ವಿಧಾನಪರಿಷತ್ತು~~
ವಿಧಾನಸೌಧ, ಬೆಂಗಳೂರು.

28
11/3/20

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆ / ~~ವಿಧಾನಪರಿಷತ್ತಿ~~ನ ಸದಸ್ಯರಾದ ಶ್ರೀ/~~ಶ್ರೀಮತಿ~~ ಬಾಲಕೃಷ್ಣ ಹಿ ಎನ್ ಇವರ ~~ಚುಕ್ಕೆ ಗುರುತಿನ~~/ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 119 ಕ್ಕೆ ಉತ್ತರ.

---

ಮೇಲ್ಕಂಡ ಪ್ರಶ್ನೆಗೆ ಸಂಬಂಧಿಸಿದಂತೆ ಉತ್ತರದ ಪ್ರತಿಗಳನ್ನು ಇದರೊಂದಿಗೆ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

(ಪಿ.ಎಸ್.ಮಾಲತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.
(ಸಂಸ್ಕೃತಿ)

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 119

ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ ಸಿ.ಎನ್.

ಉತ್ತರಿಸಬೇಕಾದ ದಿನಾಂಕ : 11-03-2020

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಬಯಲು ರಂಗಮಂದಿರಗಳನ್ನು ನಿರ್ಮಿಸಲು ರಾಜ್ಯ ಸರ್ಕಾರದ ವತಿಯಿಂದ ನೀಡುತ್ತಿರುವ ಅನುದಾನದ ಮೊತ್ತವೆಷ್ಟು; | ಬಯಲು ರಂಗಮಂದಿರ ನಿರ್ಮಾಣಕ್ಕೆ ರೂ.10.00 ಲಕ್ಷಗಳ ಅನುದಾನ ನೀಡಲಾಗುತ್ತಿದೆ. |
| ಆ) | ಈ ರಂಗಮಂದಿರಗಳನ್ನು ನಿರ್ಮಿಸಲು ರಾಜ್ಯ ಸರ್ಕಾರ ಹಾಸನ ಜಿಲ್ಲೆಗೆ ನೀಡಿರುವ ಅನುದಾನದ ಮೊತ್ತವೆಷ್ಟು; (ವಿಧಾನಸಭಾ ಕ್ಷೇತ್ರಗಳ ವಿವರ ನೀಡುವುದು) | • ರೂ.202.00 ಲಕ್ಷಗಳು<br>• ವಿಧಾನಸಭಾ ಕ್ಷೇತ್ರವಾರು ಬಿಡುಗಡೆ ಮಾಡಿರುವುದಿಲ್ಲ. |
| ಇ) | ಬಯಲು ರಂಗಮಂದಿರಗಳನ್ನು ನಿರ್ಮಿಸಲು ರಾಜ್ಯ ಸರ್ಕಾರವು ಪ್ರಸ್ತುತ ನೀಡುತ್ತಿರುವ ಅನುದಾನದ ಮೊತ್ತವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಈ) | ಹಾಗಿದ್ದಲ್ಲಿ, ಎಷ್ಟು ಮೊತ್ತವನ್ನು ಹೆಚ್ಚಿಸಲಾಗುವುದು? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಕಸಂಪಾ 23 ಕವಿಸ 2020

(ಸಿ.ಟಿ.ರವಿ)
ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು

<u>ಕರ್ನಾಟಕ ಸರ್ಕಾರ</u>

ಸಂಖ್ಯೆ:ಗ್ರಾಅಪ 44 ಜಿಪಅ 2020

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ.10.03.2020

122
48
11/03/2020

ಇಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಗ್ರಾಮೀಣಾಭಿವೃದ್ಧಿಮತ್ತು ಪಂ.ರಾಜ್ ಇಲಾಖೆ

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು

ಮಾನ್ಯರೇ,

ವಿಷಯ:- ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ರಾಜೇಶ್ ನಾಯಕ್ ಯು, (ಬಂಟ್ವಾಳ ) ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ:1308/2020ಕ್ಕೆ ಉತ್ತರ ಸಲ್ಲಿಸುವ ಬಗ್ಗೆ

********

ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ರಾಜೇಶ್ ನಾಯಕ್ ಯು, (ಬಂಟ್ವಾಳ ) ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ:1308/2020ಕ್ಕೆ ಉತ್ತರವನ್ನು(100 ಪ್ರತಿಗಳು) ಮುಂದಿನ ಕ್ರಮಕ್ಕಾಗಿ ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ
10/03/2020
(ಎಸ್.ರಂಗನಗೌಡ)
ಸರ್ಕಾರದ ಅಧೀನ ರ್ಯದರ್ಶಿ(ಸೇವೆಗಳು-ಎ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

ಪ್ರತಿಯನ್ನು:
1) ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿಯವರಿಗೆ
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾ.ಅ.ಪಂ.ರಾಜ್ ಇಲಾಖೆ ಇವರ ಆಪ್ತ ಕಾರ್ಯದರ್ಶಿಯವರಿಗೆ
3) ಸರ್ಕಾರದ ಉಪ ಕಾರ್ಯದರ್ಶಿ, ಗ್ರಾ.ಅ.ಪಂ.ರಾಜ್ ಇಲಾಖೆ ಇವರ ಆಪ್ತ ಸಹಾಯಕರಿಗೆ
4) ಸರ್ಕಾರದ ಅಧೀನ ಕಾರ್ಯದರ್ಶಿ, ಗ್ರಾ.ಅ.ಪಂ.ರಾಜ್ ಇಲಾಖೆ, ಸಮನ್ವಯ ಶಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1308
2. ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರಾಜೇಶ್ ನಾಯಕ್ ಯು.
3. ಉತ್ತರಿಸುವ ದಿನಾಂಕ : 11.03.2020
4. ಉತ್ತರಿಸುವ ಸಚಿವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಬಂಟ್ವಾಳ ಉಪ ವಿಭಾಗದಲ್ಲಿ ಮಂಜೂರಾದ ಮತ್ತು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಇಂಜಿನಿಯರ್ ಗಳ ಸಂಖ್ಯೆ ಎಷ್ಟು; ಖಾಲಿ ಇರುವ ಇಂಜಿನಿಯರ್ ನೇಮಕಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು? | ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬಂಟ್ವಾಳದಲ್ಲಿ ಒಟ್ಟು ಮಂಜೂರಾದ ಹುದ್ದೆಗಳು - 05<br><br>ಸಹಾಯಕ ಕಾರ್ಯಪಾಲಕ ಇಂಜಿನಿಯರ್ - 01<br>ಸಹಾಯಕ ಇಂಜಿನಿಯರ್ - 01<br>ಕಿರಿಯ ಇಂಜಿನಿಯರ್ - 03<br><br>ಸದರಿ ಉಪ ವಿಭಾಗದಲ್ಲಿ ಮಂಜೂರಾದ ಎಲ್ಲಾ ಹುದ್ದೆಗಳು ಭರ್ತಿಯಾಗಿದ್ದು, ಯಾವುದೇ ಹುದ್ದೆಗಳು ಖಾಲಿ ಇರುವುದಿಲ್ಲ. |
| ಆ) | ಇಂಜಿನಿಯರ್ ಕೊರತೆಯಿಂದ ಸಕಾಲದಲ್ಲಿ ಕಾಮಗಾರಿಗಳನ್ನು ಮುಕ್ತಾಯಗೊಳಿಸಲು ಸಮಸ್ಯೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಉದ್ಭವಿಸುವುದಿಲ್ಲ |
| ಇ) | ಪ್ರಸ್ತುತ ರಾಜ್ಯದಲ್ಲಿರುವ ಗ್ರಾಮ ಪಂಚಾಯತಿಗಳಿಗೆ ಅನುಗುಣವಾಗಿ ಇಲಾಖೆಯಲ್ಲಿ ಇಂಜಿನಿಯರ್ಸ್ ಸಂಖ್ಯೆ ಇದೆಯೇ; ಇಲ್ಲದಿದ್ದಲ್ಲಿ ಗ್ರಾಮ ಪಂಚಾಯತಿಗಳಿಗೆ ಅನುಗುಣವಾಗಿ ಇಂಜಿನಿಯರ್ಸ್ ನೇಮಕ ಮಾಡುವ ಉದ್ದೇಶ ಹೊಂದಿದೆಯೇ? | ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗೆ ಉಪ ವಿಭಾಗಗಳ ಕಾರ್ಯಭಾರದ ಒತ್ತಡವನ್ನು ಆಧರಿಸಿ ವಿವಿಧ ವೃಂದಗಳ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಗ್ರಾಮ ಪಂಚಾಯತ್‌ಗಳಿಗೆ ಅನುಗುಣವಾಗಿ ಹುದ್ದೆಗಳು ಇರುವುದಿಲ್ಲ. ಈ ರೀತಿ ನೇಮಕ ಮಾಡುವ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ ಗ್ರಾಅಪ 144 ಜಿಪಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು



ಕರ್ನಾಟಕ ಸರ್ಕಾರ

**ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ**

ಆಯುಕ್ತರವರ ಕಛೇರಿ ಗ್ರಾ.ಕುನೀ.ಸ.ನೈ.ಇ., 2ನೇ ಮಹಡಿ, "ಇ" ಬ್ಲಾಕ್, ಕೆಹೆಚ್‌ಬಿ ಕಟ್ಟಡ,
ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು-560009. ☎:080-22240508 📠:22240509
ಇ-ಮೇಲ್: krwssd@gmail.com

ಸಂ:ಗ್ರಾಕುನೀ&ನೈಇ 56 ಗ್ರಾನೀಸ(5)2020 ದಿನಾಂಕ:09.03.2020

145
4S
11/03/2020

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು-01.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಶಿವಶಂಕರ ರೆಡ್ಡಿ ಎನ್. ಹೆಚ್. (ಗೌರಿಬಿದನೂರು)** ಇವರ **ಚುಕ್ಕೆರಹಿತ ಪ್ರಶ್ನೆ ಸಂ:440ಕ್ಕೆ** ಸಂಬಂಧಿಸಿದ ಮೇಲಿನ ಕ್ರಮ / ವಾಸ್ತವಿಕ ವರದಿಯ ಉತ್ತರ ನೀಡುವ ಬಗ್ಗೆ.

--

ಮೇಲೆ ತಿಳಿಸಿದ ಪ್ರಶ್ನೆಗೆ ಸಂಬಂಧಿಸಿದ **100** ಪ್ರತಿಗಳನ್ನು ತಮ್ಮ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)
ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ

**ಪ್ರತಿ:**

1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿರವರಿಗೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆರವರ ಆಪ್ತ ಕಾರ್ಯದರ್ಶಿರವರಿಗೆ

**ಕರ್ನಾಟಕ ವಿಧಾನಸಭೆ**

ಸದಸ್ಯರ ಹೆಸರು : ಶ್ರೀ ಶಿವಶಂಕರ ರೆಡ್ಡಿ ಎನ್.ಹೆಚ್. (ಗೌರಿಬಿದನೂರು)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 440

ಉತ್ತರ ದಿನಾಂಕ : 11.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ವಿವಿಧ ಗ್ರಾಮಗಳಲ್ಲಿ ವಿವಿಧ ಕಂಪನಿಗಳು ಕುಡಿಯುವ ನೀರಿನ ಘಟಕಗಳನ್ನು ನಿರ್ಮಿಸಿ ನಿರ್ವಹಣೆ ಮಾಡುತ್ತಿರುವ ಘಟಕಗಳೆಷ್ಟು; | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ 17154 ನೀರು ಶುದ್ಧೀಕರಣ ಘಟಕಗಳನ್ನು ಅನುಷ್ಠಾನಗೊಳಿಸಿದ್ದು, ಈ ಪೈಕಿ 12602 ಘಟಕಗಳು ಕಾರ್ಯನಿರ್ವಹಿಸುತ್ತಿದ್ದು, 4552 ನೀರು ಶುದ್ಧೀಕರಣ ಘಟಕಗಳು ತಾತ್ಕಾಲಿಕವಾಗಿ ಕಾರ್ಯನಿರ್ವಹಿಸುತ್ತಿರುವುದಿಲ್ಲ. (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪಂಚತಂತ್ರದ ದಿನಾಂಕ:28.02.2020ರ ದಾಖಲಾತಿ ಪ್ರಕಾರ)<br><br>ಗ್ರಾಮೀಣ ಕುಡಿಯುವ ನೀರು & ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ, ಕೆ.ಆರ್.ಐ.ಡಿ.ಎಲ್.ಸಂಸ್ಥೆ ಮುಖೇನ, ಸಹಕಾರ ಸಂಘ/ಸಂಸ್ಥೆ ಮುಖೇನ ಮತ್ತು ಗ್ರಾಮ ಪಂಚಾಯತಿ ಮಟ್ಟದಲ್ಲಿ ಇತರೆ ಅನುದಾನದಲ್ಲಿ ಅನುಷ್ಠಾನಗೊಳಿಸಿರುವ ಘಟಕಗಳ ಪೈಕಿ, ನಿರ್ವಹಣೆ ಅವಧಿ ಮುಗಿದಿರುವ/ ನಿರ್ವಹಣೆ ಸಮಸ್ಯೆ ಇರುವ 8142 ಘಟಕಗಳನ್ನು ಟೆಂಡರ್ ಕರೆಯಲಾಗಿದ್ದು, ದಿನಾಂಕ:28.02.2020ರ ಮಾಹಿತಿ ಪ್ರಕಾರ 7312 ನೀರು ಶುದ್ಧೀಕರಣ ಘಟಕಗಳಿಗೆ ಅನುಮೋದನೆಯಾದ ಸಂಸ್ಥೆ/ ಗುತ್ತಿಗೆದಾರರಿಗೆ ಮುಂದಿನ 5 ವರ್ಷಗಳ ಅವಧಿವರೆಗೆ ನಿರ್ವಹಣೆಗಾಗಿ ಹಸ್ತಾಂತರ ಮಾಡಲು ಕ್ರಮವಹಿಸಲಾಗಿದೆ. |
| ಆ. | ಇವುಗಳಲ್ಲಿ ಕೆಲಸ ಮಾಡದೇ ಇರುವಂತಹ ಕುಡಿಯುವ ನೀರಿನ ಘಟಕಗಳ ಸಂಖ್ಯೆ ಎಷ್ಟು; | |
| ಇ. | ಕೆಲವು ಕಂಪನಿಗಳು ಸರಿಯಾಗಿ ನಿರ್ವಹಣೆ ಮಾಡದೇ ಕೆಟ್ಟು ಹೋಗಿರುವ ಘಟಕಗಳ ಸಂಖ್ಯೆ ಎಷ್ಟು; ಅಂತಹ ಘಟಕಗಳ ನಿರ್ವಹಣೆಯ ಬಗ್ಗೆ ಸರ್ಕಾರವು ಕೈಗೊಂಡ ಕ್ರಮವೇನು; | |
| ಈ. | ಕೆಟ್ಟು ಹೋದಂತಹ ಕುಡಿಯುವ ನೀರಿನ ಘಟಕಗಳ ನಿರ್ವಹಣೆಯನ್ನು ಗ್ರಾಮ ಪಂಚಾಯಿತಿಯು ನಿರ್ವಹಿಸುತ್ತಿದೆಯೇ; | ಗ್ರಾಮೀಣ ಕುಡಿಯುವ ನೀರು & ನೈರ್ಮಲ್ಯ ಇಲಾಖೆಯಿಂದ ನಿರ್ವಹಣೆಗಾಗಿ ಕರೆದಿರುವ ಟೆಂಡರ್‌ನಲ್ಲಿ 4 ರಿಂದ 5 ಬಾರಿ ಟೆಂಡರ್ ಕರೆದರೂ, ಟೆಂಡರ್‌ನಲ್ಲಿ ಯಾರು ಭಾಗವಹಿಸದೇ ಇರುವ ನೀರು ಶುದ್ಧೀಕರಣ ಘಟಕಗಳನ್ನು ಗ್ರಾಮ ಪಂಚಾಯತಿಗೆ ಮುಂದಿನ ನಿರ್ವಹಣೆಗಾಗಿ ಹಸ್ತಾಂತರ ಮಾಡಲಾಗುತ್ತಿದೆ. |
| ಉ. | ಇಡೀ ರಾಜ್ಯದಲ್ಲಿ ಹಂತ ಹಂತವಾಗಿ ನಿರ್ಮಾಣವಾದಂತಹ ಘಟಕಗಳ ವಾರ್ಷಿಕ ನಿರ್ವಹಣೆಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ಒದಗಿಸುವುದು) | ಗ್ರಾಮೀಣ ಕುಡಿಯುವ ನೀರು & ನೈರ್ಮಲ್ಯ ಇಲಾಖೆಯ ಟೆಂಡರ್ ಮುಖೇನ, ಕೆ.ಆರ್.ಐ.ಡಿ.ಎಲ್.ಸಂಸ್ಥೆ ಮುಖೇನ, ಸಹಕಾರ ಸಂಘ/ಸಂಸ್ಥೆ ಮುಖೇನ ಮತ್ತು ಗ್ರಾಮ ಪಂಚಾಯತಿ ಮಟ್ಟದಲ್ಲಿ ಇತರೆ ಅನುದಾನದಲ್ಲಿ ಅನುಷ್ಠಾನಗೊಳಿಸಿರುವ ಘಟಕಗಳ ಪೈಕಿ, ನಿರ್ವಹಣೆ ಅವಧಿ ಮುಗಿದಿರುವ/ ನಿರ್ವಹಣೆ ಸಮಸ್ಯೆ ಇರುವ 8142 ಘಟಕಗಳನ್ನು ಟೆಂಡರ್ ಕರೆಯಲಾಗಿದ್ದು, ದಿನಾಂಕ:28.02.2020ರ ಮಾಹಿತಿ ಪ್ರಕಾರ 7312 ನೀರು ಶುದ್ಧೀಕರಣ ಘಟಕಗಳಿಗೆ ಟೆಂಡರ್ ಮುಖೇನ ಅನುಮೋದನೆಯಾದ ಗುತ್ತಿಗೆದಾರರಿಗೆ ಮುಂದಿನ 5 ವರ್ಷಗಳ ಅವಧಿವರೆಗೆ ನಿರ್ವಹಣೆಗಾಗಿ ಹಸ್ತಾಂತರ ಮಾಡಲು ಕ್ರಮವಹಿಸಲಾಗಿದೆ. |

ಸಂ:ಗ್ರಾಕುನೀ&ನೈಇ 56 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಕಸಂವಾ 30 ಕವಿಸ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 10-3-2020.

153
11/3/20

ಇಂದ:-
ಸರ್ಕಾರದ ಕಾರ್ಯದರ್ಶಿಗಳು,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ,
ಬೆಂಗಳೂರು.

ಇವರಿಗೆ:-
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ / ವಿಧಾನಪರಿಷತ್ತು
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನಸಭೆ / ~~ವಿಧಾನಪರಿಷತ್ತಿನ~~ ಸದಸ್ಯರಾದ
ಶ್ರೀ/~~ಶ್ರೀಮತಿ~~ ಸೋಮಲಿಂಗಪ್ಪ ಎಂ.ಎಸ್ ಇವರ
~~ಚುಕ್ಕೆ ಗುರುತಿನ~~/ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ.1328 ಕ್ಕೆ ಉತ್ತರ.

---

ಮೇಲ್ಕಂಡ ಪ್ರಶ್ನೆಗೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ,

Malathi PS
10/3/20
(ಪಿ.ಎಸ್.ಮಾಲತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.
(ಸಂಸ್ಕೃತಿ)

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1328

ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ ಎಂ.ಎಸ್.(ಸಿರಗುಪ್ಪ)

ಉತ್ತರಿಸಬೇಕಾದ ದಿನಾಂಕ : 11-03-2020

ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ, ಯುವಜನ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬಳ್ಳಾರಿ ಜಿಲ್ಲೆಯಲ್ಲಿ ಕಲಾವಿದರ ಮಾಸಾಶನ ಪಡೆಯುತ್ತಿರುವ ಕಲಾವಿದರ ಸಂಖ್ಯೆ ಎಷ್ಟು; ಪ್ರತಿ ತಿಂಗಳು ಕಲಾವಿದರು ಪಡೆಯುತ್ತಿರುವ ಮಾಸಾಶನ ಮೊತ್ತ ಎಷ್ಟು; | • ಬಳ್ಳಾರಿ ಜಿಲ್ಲೆಯಲ್ಲಿ ಮಾಸಾಶನ ಪಡೆಯುತ್ತಿರುವ ಕಲಾವಿದರ ಒಟ್ಟು ಸಂಖ್ಯೆ - 445<br>• ಪ್ರತಿ ತಿಂಗಳು ರೂ. 2000/-ಮಾಸಾಶನವನ್ನು ನೀಡಲಾಗುತ್ತಿದೆ. |
| ಆ) | ಬಳ್ಳಾರಿ ಜಿಲ್ಲೆಯಲ್ಲಿ ಕಲಾವಿದರು ಮಾಸಾಶನಕ್ಕೆ ಅರ್ಜಿ ಸಲ್ಲಿಸಿರುವವರ ಸಂಖ್ಯೆ ಎಷ್ಟು; (ಪ್ರತಿ ತಾಲ್ಲೂಕುವಾರು ಮಾಹಿತಿ ಒದಗಿಸುವುದು) | (see table below) |
| ಇ) | ಸಿರುಗುಪ್ಪ ತಾಲ್ಲೂಕಿನಲ್ಲಿ ಮಾಸಾಶನ ಪಡೆಯುತ್ತಿರುವ ಕಲಾವಿದರ ಸಂಖ್ಯೆ ಎಷ್ಟು? (ಸಂಖ್ಯೆ ಮತ್ತು ಕಲಾವಿದರ ಹೆಸರು ಪೂರ್ಣ ಮಾಹಿತಿ ಒದಗಿಸುವುದು) | ಸಿರುಗುಪ್ಪ ತಾಲ್ಲೂಕಿನಲ್ಲಿ ಮಾಸಾಶನ ಪಡೆಯುತ್ತಿರುವವರ ಒಟ್ಟು ಸಂಖ್ಯೆ - 20, ಕಲಾವಿದರ ಹೆಸರು ಮತ್ತು ಮಾಹಿತಿಯ ಅನುಬಂಧ -01 ಲಗತ್ತಿಸಿದೆ. |

| ಕ್ರ. ಸಂ | ತಾಲ್ಲೂಕು | 2018-19 ಮತ್ತು 2019-20ನೇ ಸಾಲಿನಲ್ಲಿ ತಾಲ್ಲೂಕುವಾರು ಮಾಸಾಶನ ಕೋರಿ ಅರ್ಜಿ ಸಲ್ಲಿಸಿರುವವರ ಸಂಖ್ಯೆ | | |
|---|---|---|---|---|
| | | 2018-19 | 2019-20 | ಒಟ್ಟು |
| 1 | ಬಳ್ಳಾರಿ | 4 | 4 | 8 |
| 2 | ಹೊಸಪೇಟೆ | 0 | 6 | 6 |
| 3 | ಕೊಟ್ಟೂರು | 3 | 1 | 4 |
| 4 | ಹೂವಿನ ಹಡಗಲಿ | 1 | 3 | 4 |
| 5 | ಕುರುಗೋಡು | 0 | 1 | 1 |
| 6 | ಹರಪನಹಳ್ಳಿ | 1 | 1 | 2 |
| 7 | ಸಂಡೂರು | 0 | 1 | 1 |
| 8 | ಕೂಡ್ಲಿಗಿ | 1 | 0 | 1 |
| 9 | ಶಿರುಗುಪ್ಪ | 1 | 0 | 1 |
| 10 | ಹಗರಿಬೊಮ್ಮನಹಳ್ಳಿ | 1 | 0 | 1 |
| | ಒಟ್ಟು | 12 | 17 | 29 |
| | | | ಒಟ್ಟು | 29 |

ಕಸಂಇಪ 30 ಕವಿಸ 2020

(ಸಿ.ಟಿ.ರವಿ)
ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ,
ಯುವಜನ ಸಬಲೀಕರಣ ಹಾಗೂ
ಕ್ರೀಡಾ ಇಲಾಖೆ ಸಚಿವರು

ವಿಧಾನಸಭೆಯ ಸದಸ್ಯರಾದ ಶ್ರೀ. ಸೋಮಲಿಂಗಪ್ಪ ಎಂ.ಎಸ್
ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ. 132ಕ್ಕೆ ಅನುಬಂಧ-01

ಸಿರುಗುಪ್ಪ ತಾಲ್ಲೂಕಿನಲ್ಲಿ ಮಾಶಾಸನ ಪಡೆಯುತ್ತಿರುವವರ ವಿವರ

| ಕ್ರ.ಸಂ | ಕಲಾವಿದರ ಹೆಸರು | ಪಿಂಚಣಿ ಪಾವತಿ ಆದೇಶ |
|---|---|---|
| 1. | ಶ್ರೀ ವೀರಭದ್ರಯ್ಯಸ್ವಾಮಿ | 10380/ART |
| 2. | ಶ್ರೀ ಮಹಾಬಲೇಶ್ವರಪ್ಪ .ಎಸ್.ಆರ್ | 17569/ART |
| 3. | ಶ್ರೀ.ಮರಿಸ್ವಾಮಿ.ಕೆ.ಎಂ. | 20083/ART |
| 4. | ಶ್ರೀ.ವೀರಭದ್ರಪ್ಪ | 20081/ART |
| 5. | ಶ್ರೀ ಆರ್.ನಾಗರೆಡ್ಡಿ | 20472/ART |
| 6. | ಶ್ರೀ ಬಿ.ರುದ್ರಗೌಡ | 20461/ART |
| 7. | ಶ್ರೀ ಎಲ್.ಪಕೀರಪ್ಪ | 20517/ART |
| 8. | ಶ್ರೀ ಸಿ.ಬಿ ಬಸವನಗೌಡ | 11110/ART |
| 9. | ಶ್ರೀ ಕೊರಚರ ಹುಲುಗಪ್ಪ | 11862/ART |
| 10. | ಶ್ರೀ ಬಿ.ಶಿವರೆಡ್ಡಿಗೌಡ | 11843/ART |
| 11. | ಶ್ರೀ ಮರಿಸ್ವಾಮಿ ಮದರಿ | 398/SPL/Pen |
| 12. | ಶ್ರೀ ದೊಡ್ಡಬಸವರಾಯ ಗವಾಯಿ | 14790/ART |
| 13. | ಶ್ರೀ ಪ್ಯಾತಿ ಶಿವನೇಗೌಡ | 17567/ART |
| 14. | ಶ್ರೀ ಹೆಚ್.ರಾಮಪ್ಪ | 20496/ART |
| 15. | ಶ್ರೀ ವೈ.ಚನ್ನಪ್ಪ ಹಗಲುವೇಷ | 20490/ART |
| 16. | ಶ್ರೀ ಮುದುಕಪ್ಪ | 19646/ART |
| 17. | ಶ್ರೀ ವೀರಗೌಡ ಜಿ. | 20503/ART |
| 18. | ಶ್ರೀ ಬಿ.ಶಂಕರಪ್ಪ | 20491/ART |
| 19. | ಶ್ರೀ ಬಸವರಾಜಯ್ಯ ಕೆ.ಎಂ | 24909/ART |
| 20. | ಶ್ರೀ ಗೋಪಾಲರೆಡ್ಡಿ | 24920/ART |



ಕರ್ನಾಟಕ ಸರ್ಕಾರ

**ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ**

ಆಯುಕ್ತರವರ ಕಛೇರಿ ಗ್ರಾ.ಕುನೀ.ಸ.ನೈ.ಇ., 2ನೇ ಮಹಡಿ, "ಇ" ಬ್ಲಾಕ್, ಕೆಹೆಚ್‌ಬಿ ಕಟ್ಟಡ,
ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು-560009. ☎:080-22240508 📠:22240509

ಇ-ಮೇಲ್: krwssd@gmail.com

ಸಂ:ಗ್ರಾಕುನೀ&ನೈಇ 64 ಗ್ರಾನೀಸ(5)2020 ದಿನಾಂಕ:09.03.2020

(109) US 11/03/2020

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು-01.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ನಿಸರ್ಗ ನಾರಾಯಣಸ್ವಾಮಿ ಎಮ್.ಎನ್ (ದೇವನಹಳ್ಳಿ)** ಇವರ **ಚುಕ್ಕೆರಹಿತ ಪ್ರಶ್ನೆ ಸಂ:1139ಕ್ಕೆ** ಸಂಬಂಧಿಸಿದ ಮೇಲಿನ ಕ್ರಮ / ವಾಸ್ತವಿಕ ವರದಿಯ ಉತ್ತರ ನೀಡುವ ಬಗ್ಗೆ.

--

ಮೇಲೆ ತಿಳಿಸಿದ ಪ್ರಶ್ನೆಗೆ ಸಂಬಂಧಿಸಿದ **100** ಪ್ರತಿಗಳನ್ನು ತಮ್ಮ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)
ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ

**ಪ್ರತಿ:**
1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿರವರಿಗೆ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆರವರ ಆಪ್ತ ಕಾರ್ಯದರ್ಶಿರವರಿಗೆ

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್ (ದೇವನಹಳ್ಳಿ)

ಚುಕ್ಕೆರಹಿತ ಪ್ರಶ್ನೆ ಸಂಖ್ಯೆ : 1139

ಉತ್ತರ ದಿನಾಂಕ : 11.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ಜನರಿಗೆ ಶುದ್ಧ ಕುಡಿಯುವ ನೀರು ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ (ಮಾಹಿತಿ ನೀಡುವುದು) | ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಜಲಮೂಲಗಳು ಕಲುಷಿತಗೊಂಡಿರುವ ಪ್ರದೇಶಗಳಲ್ಲಿ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಶುದ್ಧ ಕುಡಿಯುವ ನೀರಿನ ತೊಂದರೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರವು ಶುದ್ಧ ಕುಡಿಯುವ ನೀರು ಒದಗಿಸಲು ಕೈಗೊಂಡಿರುವ ಕ್ರಮಗಳೇನು; (ಪೂರ್ಣ ವಿವರ ನೀಡುವುದು) | ಯಾವುದಾದರೂ ಜನವಸತಿಯ ಎಲ್ಲಾ ಜಲಮೂಲಗಳು ಕಲುಷಿತಗೊಂಡಿದ್ದಲ್ಲಿ ಶುದ್ಧ ಕುಡಿಯುವ ನೀರು ಒದಗಿಸಲು ಕ್ರಮವಹಿಸಲಾಗುವುದು. ಪ್ರಸ್ತುತ ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಒಟ್ಟು 62 ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಅಳವಡಿಸಲಾಗಿದೆ. |
| ಇ) | ಯಾವ ಕಾಲಮಿತಿಯಲ್ಲಿ ಕುಡಿಯುವ ನೀರನ್ನು ಒದಗಿಸಲಾಗುವುದು ಮತ್ತು ಇದಕ್ಕಾಗಿ ಎಷ್ಟು ಅನುದಾನವನ್ನು ಸರ್ಕಾರ ಮೀಸಲಿಟ್ಟಿದೆ? (ಪೂರ್ಣ ಮಾಹಿತಿ ನೀಡುವುದು) | 2019–20ನೇ ಸಾಲಿನಲ್ಲಿ NRDWP ಕ್ರಿಯಾ ಯೋಜನೆಯಡಿ ದೇವನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಕುಡಿಯುವ ನೀರು ಸರಬರಾಜು ಮಾಡಲು 133 ಕಾಮಗಾರಿಗಳಿಗೆ ರೂ.800.90ಲಕ್ಷಗಳಿಗೆ ಕ್ರಿಯಾ ಯೋಜನೆ ಅನುಮೋದನೆಯಾಗಿದ್ದು, ಸದರಿ ಕಾಮಗಾರಿಗಳ ಪೈಕಿ 119 ಕಾಮಗಾರಿಗಳು ಪೂರ್ಣಗೊಂಡಿದ್ದು, ರೂ.593.78ಲಕ್ಷಗಳು ವೆಚ್ಚವಾಗಿರುತ್ತವೆ.<br><br>2019–20ನೇ ಸಾಲಿನಲ್ಲಿ ಅಧ್ಯಕ್ಷರ ವಿವೇಚನಾ ಅನುದಾನದಡಿ 7 ಕಾಮಗಾರಿಗಳಿಗೆ ರೂ.22.14ಲಕ್ಷಗಳಿಗೆ ಅನುಮೋದನೆಯಾಗಿದ್ದು, ಸದರಿ ಕಾಮಗಾರಿಗಳು ಪೂರ್ಣಗೊಂಡಿದ್ದು, ಕುಡಿಯುವ ನೀರಿನ ಸರಬರಾಜು ಮಾಡಲಾಗುತ್ತಿದೆ.<br><br>2018–19ನೇ ಸಾಲಿನಲ್ಲಿ ಅನುಮೋದನೆಯಾಗಿರುವ ಟಾಸ್ಕ್‌ಫೋರ್ಸ್ ಕ್ರಿಯಾ ಯೋಜನೆಯಡಿ ದೇವನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಕುಡಿಯುವ ನೀರು ಸರಬರಾಜು ಮಾಡಲು 17 ಕಾಮಗಾರಿಗಳನ್ನು ರೂ.48.93 ಲಕ್ಷಗಳ ವೆಚ್ಚದಲ್ಲಿ ಅನುಷ್ಠಾನಗೊಳಿಸಲಾಗಿರುತ್ತದೆ. |

ಸಂ:ಗ್ರಾಕುನೀ&ನೈಇ 64 ಗ್ರಾನೀಸ(5)20

(ಕೆ.ಎಸ್. ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು



**ಕರ್ನಾಟಕ ಸರ್ಕಾರ**

ಸಂ: ಟಿಡಿ 58 ಟಿಸಿಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 11.03.2020.

50
11/3/20

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ಸಾರಿಗೆ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

**ವಿಷಯ**: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 536 ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ**: ತಮ್ಮ ಪತ್ರ ಸಂಖ್ಯೆ:ವಿಸಪ್ರಶಾ/15 ನೇವಿಸ/6ಅ/ಚುಗು-ಚುರ.ಪ್ರಶ್ನೆ /05/2020, ದಿನಾಂಕ: 02.03.2020

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ. ಶೇಖರ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:536 ಕ್ಕೆ ದಿನಾಂಕ:11.03.2020ರಂದು ಸದನದಲ್ಲಿ ಉತ್ತರ ನೀಡುವ ಸಲುವಾಗಿ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

Mala S

**(ಮಾಲಾ ಎಸ್.)**
ಶಾಖಾಧಿಕಾರಿ,
ಸಾರಿಗೆ-1 ಶಾಖೆ, ಸಾರಿಗೆ ಇಲಾಖೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 536
ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ. ಶೇಖರ್(ಹೊಸದುರ್ಗ)
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 11-03-2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೆ.ಎಸ್.ಆರ್.ಟಿ.ಸಿ ಹಾಗೂ ಇತರೆ ಸರ್ಕಾರಿ ಸ್ವಾಮ್ಯದ ನಿಗಮಗಳಲ್ಲಿ ಎಷ್ಟು ನೌಕರರು ಸೇವೆ ಸಲ್ಲಿಸುತ್ತಿದ್ದಾರೆ; ಇವರಿಗೆ ಯಾವ ರೀತಿಯ ಸೇವಾ ಭದ್ರತೆ ಒದಗಿಸಲಾಗಿದೆ; | ರಾಜ್ಯದಲ್ಲಿ ಕೆ.ಎಸ್.ಆರ್.ಟಿ.ಸಿ ಹಾಗೂ ಇತರೆ ಸರ್ಕಾರಿ ಸ್ವಾಮ್ಯದ ಸಾರಿಗೆ ನಿಗಮಗಳಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರ ಸಂಖ್ಯೆ ಈ ಕೆಳಗಿನಂತಿದೆ: (ಕೆಳಗಿನ ಕೋಷ್ಟಕ 1) ಸೇವಾ ಭದ್ರತೆ ಮಾಹಿತಿಯನ್ನು **ಅನುಬಂಧ-'ಅ'** ರಲ್ಲಿ ನೀಡಿದೆ. |
| ಆ) | ಈ ನೌಕರರು ಸರ್ಕಾರಿ ನೌಕರರೇ; ಅಥವಾ ಕಾರ್ಮಿಕರೇ; ಇವರನ್ನು ಸರ್ಕಾರಿ ನೌಕರರೆಂದು ಪರಿಗಣಿಸಲು ಸರ್ಕಾರದ ಕ್ರಮ ಕೈಗೊಳ್ಳುವುದೇನು; (ವಿವರ ಒದಗಿಸುವುದು) | ಈ ನೌಕರರುಗಳು ಸಾರಿಗೆ ಸಂಸ್ಥೆಗಳ ನೌಕರರಾಗಿರುತ್ತಾರೆ. ಇವರುಗಳನ್ನು ಸರ್ಕಾರಿ ನೌಕರರೆಂದು ಪರಿಗಣಿಸುವ ಕುರಿತು ನೌಕರರು ಹಾಗೂ ಕೆಲ ಸಂಘ ಸಂಸ್ಥೆಗಳಿಂದ ಮನವಿಗಳು ಸ್ವೀಕೃತವಾಗಿದ್ದು, ಅದರ ಪೂರ್ಣ ಸಾಧಕ-ಬಾಧಕಗಳ ಬಗ್ಗೆ ಪರಿಶೀಲಿಸಲಾಗುತ್ತಿದೆ. |
| ಇ) | ಕಳೆದ ಮೂರು ವರ್ಷಗಳಲ್ಲಿ ಸಾರಿಗೆ ನಿಗಮಕ್ಕೆ ಸರ್ಕಾರದಿಂದ ನೀಡಿದ ಅನುದಾನವೆಷ್ಟು; ಎಲ್ಲಾ ನಿಗಮಗಳು ಆದಾಯದಲ್ಲಿವೆಯೇ; ಅಥವಾ ನಷ್ಟದಲ್ಲಿವೆಯೇ; ಇವುಗಳ ಪುನಶ್ಚೇತನಕ್ಕೆ ಸರ್ಕಾರ ಕೈಗೊಂಡಿರುವ ಕ್ರಮವೇನು; | ಕಳೆದ 3 ವರ್ಷಗಳಲ್ಲಿ ಕರಾರಸಾರಿಗೆ ನಿಗಮಕ್ಕೆ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನದ ವಿವರ ಈ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ 2) ಎಲ್ಲಾ ಸಾರಿಗೆ ನಿಗಮಗಳು ನಷ್ಟವನ್ನು ಅನುಭವಿಸುತ್ತಿರುತ್ತವೆ. ಸಾರಿಗೆ ನಿಗಮಗಳ ಪುನಶ್ಚೇತನಕ್ಕೆ ಸರ್ಕಾರ ಕೈಗೊಂಡ ಕ್ರಮಗಳು **"ಅನುಬಂಧ-ಆ"** ರಲ್ಲಿ ನೀಡಲಾಗಿದೆ. |
| ಈ) | ಲಾಭದಾಯಕವಿರುವ ಹೊಸದುರ್ಗ ಬೆಂಗಳೂರಿಗೆ ನೇರವಾಗಿ ಹೊಸದುರ್ಗ-ಹಿರಿಯೂರು ಮೂಲಕ ದಿನ ನಿತ್ಯ ಬೆಂಗಳೂರಿಗೆ ಹೊಸದುರ್ಗ ಮಧ್ಯೆ ಹೊಸ ಐರಾವತ ಬಸ್ಸುಗಳ ಸೌಲಭ್ಯ ಕಲ್ಪಿಸಲಾಗುವುದೇ; | ಕ.ರಾ.ರ.ಸಾರಿಗೆ ನಿಗಮದ ವತಿಯಿಂದ ಹೊಸದುರ್ಗ-ಹಿರಿಯೂರು-ಬೆಂಗಳೂರು ಮಾರ್ಗದಲ್ಲಿ ಹೊಸದುರ್ಗದಿಂದ ಸಮಯ 5.15, 11.00 ಹಾಗೂ 17.30ಕ್ಕೆ ನಿರ್ಗಮಿಸುವಂತೆ 3 ರಾಜಹಂಸ ಸಾರಿಗೆಗಳು ಹಾಗೂ 7.45 ಮತ್ತು 8.45ಕ್ಕೆ ನಿರ್ಗಮಿಸುವಂತೆ 2 ವೇಗದೂತ ಸಾರಿಗೆ ಸೌಲಭ್ಯ ಕಲ್ಪಿಸಲಾಗಿದೆ. ಸದರಿ ಸಾರಿಗೆಗಳು ಸಾರ್ವಜನಿಕ ಪ್ರಯಾಣಿಕರ ಅವಶ್ಯಕತೆಗೆ ಅನುಗುಣವಾಗಿರುತ್ತವೆ. ಈ ಮಾರ್ಗದಲ್ಲಿ ಐರಾವತ ಸಾರಿಗೆಗಳನ್ನು ಆಚರಣೆ ಮಾಡುವುದು ನಿಗಮದ ಆರ್ಥಿಕ ಹಿತದೃಷ್ಟಿಯಿಂದ ಸೂಕ್ತವಾಗಿರುವುದಿಲ್ಲ. |

ಕೋಷ್ಟಕ 1 (ಅ):

| ಸಂಸ್ಥೆ | ನೌಕರರ ಸಂಖ್ಯೆ |
|---|---|
| ಕ.ರಾ.ರ.ಸಾ.ನಿಗಮ | 38440 |
| ಬೆಂ.ಮ.ಸಾ.ಸಂಸ್ಥೆ | 33405 |
| ವಾ.ಕ.ರ.ಸಾ.ಸಂಸ್ಥೆ | 23225 |
| ಈ.ಕ.ರ.ಸಾ.ಸಂಸ್ಥೆ | 20420 |
| ಒಟ್ಟು | **1,15,490** |

ಕೋಷ್ಟಕ 2 (ಇ): (ರೂ.ಕೋಟಿಗಳಲ್ಲಿ)

| ಸಂಸ್ಥೆಗಳ ಹೆಸರು | 2016-17 | 2017-18 | 2018-19 |
|---|---|---|---|
| ಕ.ರಾ.ರ.ಸಾ.ನಿಗಮ | 62.76 | 89.26 | 99.26 |
| ಬೆಂ.ಮ.ಸಾ.ಸಂಸ್ಥೆ | 80.47 | 203.78 | 351.98 |
| ವಾ.ಕ.ರ.ಸಾ.ಸಂಸ್ಥೆ | 57.95 | 79.34 | 80.01 |
| ಈ.ಕ.ರ.ಸಾ.ಸಂಸ್ಥೆ | 83.32 | 71.24 | 78.08 |
| ಒಟ್ಟು | 284.50 | 443.62 | 609.33 |

| | | |
|---|---|---|
| ಉ) | ಹೊಸದುರ್ಗದಿಂದ-ಮಣಿಪಾಲ, ಮಂಗಳೂರು, ನೇರವಾಗಿ ಚಳ್ಳಕೆರೆ ಮುಖಾಂತರ-ಮಂತ್ರಾಲಯಕ್ಕೆ ಐರಾವತ ಬಸ್‌ಗಳ ಸೌಲಭ್ಯ ಕಲ್ಪಿಸಲು ಸರ್ಕಾರವು ಕ್ರಮ ಕೈಗೊಳ್ಳಲಾಗುವುದೇ? | ಹೊಸದುರ್ಗದಿಂದ ಮಣಿಪಾಲ್‌ಗೆ ಪ್ರಯಾಣಿಸುವ ಪ್ರಯಾಣಿಕರು ಚಳ್ಳಕೆರೆ-ಚಿತ್ರದುರ್ಗ-ಹೊಳಲ್ಕೆರೆ-ಚನ್ನಗಿರಿ-ಶಿವಮೊಗ್ಗ-ತೀರ್ಥಹಳ್ಳಿ-ಮಣಿಪಾಲ್ ಮಾರ್ಗದಲ್ಲಿ ಆಚರಣೆಯಾಗುತ್ತಿರುವ ಸಾರಿಗೆಯ ಉಪಯೋಗವನ್ನು ಪಡೆದುಕೊಳ್ಳುತ್ತಿರುತ್ತಾರೆ.<br><br>ಹೊಸದುರ್ಗ-ಮಂಗಳೂರು ಮಾರ್ಗದಲ್ಲಿ 05.00 ಹಾಗೂ 22.15ಕ್ಕೆ ವೇಗದೂತ ಸಾರಿಗೆಗಳು ಕಾರ್ಯಾಚರಣೆಯಲ್ಲಿರುತ್ತವೆ.<br><br>ಹೊಸದುರ್ಗ-ಮಂತ್ರಾಲಯಕ್ಕೆ ಪ್ರಯಾಣಿಸುವ ಪ್ರಯಾಣಿಕರು ಬೆಂಗಳೂರಿನಿಂದ ಬಳ್ಳಾರಿ ಮಾರ್ಗವಾಗಿ ಮಂತ್ರಾಲಯಕ್ಕೆ ವೇಗದೂತ ಸಾರಿಗೆ ಆಚರಣೆಯಲ್ಲಿದ್ದು, ಸದರಿ ಸಾರಿಗೆಯಲ್ಲಿ ಹಿರಿಯೂರಿನಿಂದ ಮಂತ್ರಾಲಯಕ್ಕೆ ಪ್ರಯಾಣಿಸಬಹುದಾಗಿರುತ್ತದೆ.<br><br>ಹೊಸದುರ್ಗದಿಂದ ಮಣಿಪಾಲ್, ಮಂಗಳೂರಿಗೆ ಹಾಗೂ ಹೊಸದುರ್ಗ-ಚಳ್ಳಕೆರೆ-ಮಂತ್ರಾಲಯ ಮಾರ್ಗದಲ್ಲಿ ನೇರ ಪ್ರಯಾಣಿಕರ ಕೊರತೆಯಿರುವುದರಿಂದ ಸದರಿ ಮಾಗಗಳಲ್ಲಿ ಐರಾವತ ಬಸ್ಸುಗಳ ಆಚರಣೆ ಮಾಡುವುದು ನಿಗಮದ ಹಿತದೃಷ್ಟಿಯಿಂದ ಸೂಕ್ತವಾಗಿರುವುದಿಲ್ಲ. |

ಸಂಖ್ಯೆ: ಟಿಡಿ 58 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

## ಅನುಬಂಧ-ಅ

1. ವೇತನ : ರಾಜ್ಯದ ನಾಲ್ಕು ರಸ್ತೆ ಸಾರಿಗೆ ನಿಗಮಗಳ ನೌಕರರ ಮತ್ತು ಅಧಿಕಾರಿಗಳ ವೇತನಪರಿಷ್ಕರಣೆಯನ್ನು ನಾಲ್ಕು ವರ್ಷಗಳಿಗೊಮ್ಮೆ ಮಾಡಲಾಗುತ್ತದೆ.

2. ನಿಗಮದ ನೌಕರರು ರಾಜ್ಯ ಸರ್ಕಾರದ ನೌಕರರು ಪಡೆಯುತ್ತಿರುವ ಮಾದರಿಯಲ್ಲಿಯೇ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಭತ್ಯೆಗೆ ಅರ್ಹರಿರುತ್ತಾರೆ.

3. ರಾಜ್ಯ ಸರ್ಕಾರದ ಮಾದರಿಯಲ್ಲಿ ಗಳಿಕೆ ರಜೆ ಸೌಲಭ್ಯ, ಗಳಿಕೆ ರಜೆ ನಗದೀಕರಣ, ಹೆರಿಗೆ ರಜೆ ಸೌಲಭ್ಯ, ವೈದ್ಯಕೀಯ ಮರುಪಾವತಿ ಸೌಲಭ್ಯವನ್ನು ಒದಗಿಸಲಾಗಿದೆ.

4. **ಭವಿಷ್ಯ ನಿಧಿ ಮತ್ತು ಕುಟುಂಬ ಪಿಂಚಣಿ ಯೋಜನೆ:** ನೌಕರರ ವೇತನದ (Basic+DA) ಮೇಲೆ ಶೇ 12ರಷ್ಟು ಕಡಿತ ಮಾಡಿ ನೌಕರರ ಭವಿಷ್ಯ ನಿಧಿ ಖಾತೆಗೆ ಪಾವತಿಸಲಾಗುತ್ತದೆ. ಜೊತೆಗೆ, ಆಡಳಿತ ವರ್ಗದ ಪರವಾಗಿ ಸಹ ಶೇ.12 ಅನ್ನು ಪಾವತಿಸಲಾಗುತ್ತದೆ. ಆಡಳಿತ ವರ್ಗದ ಶೇ.12 ರಲ್ಲಿ ಶೇ.8.33 ರಷ್ಟನ್ನು ಹಾಲಿ ರೂ.1250/- ಕ್ಕೆ ಸೀಮಿತಗೊಳಿಸಿ ನೌಕರರ ಪಿಂಚಣಿ ಸಲುವಾಗಿ ಪಾವತಿಸಲಾಗುತ್ತದೆ.

   **ಕಾರ್ಮಿಕರ ಠೇವಣಿ ವಿಮಾ ಯೋಜನೆ (ಇಡಿಎಲ್ಐ):** ಭವಿಷ್ಯ ನಿಧಿಯಡಿ ಮೃತ ನೌಕರರ ನಾಮಿನಿದಾರರು ಗರಿಷ್ಠ ರೂ.6.00 ಲಕ್ಷಗಳ ವರೆಗೆ ಈ ಯೋಜನೆಯಡಿ ವಿಮಾ ಪರಿಹಾರಕ್ಕೆ ಅರ್ಹರಿರುತ್ತಾರೆ.

5. **ಉಪದನ ಯೋಜನೆ:** ನಿಗಮದ ಉಪದನ ನಿಯಮಾವಳಿ ಅಥವಾ ಉಪದನ ಕಾಯ್ದೆ (ಕೈಗಾರಿಕಾ ಒಪ್ಪಂದದ ಕ್ಲಾಸ್ ನಂತೆ) ಇವೆರಡರ ಪೈಕಿ ನೌಕರರಿಗೆ ಯಾವುದು ಅನುಕೂಲವಾಗುತ್ತದೆಯೋ ಆ ಮೊತ್ತವನ್ನು ಯಾವುದೇ ಮಿತಿಯ ನಿರ್ಬಂಧವಿಲ್ಲದೇ ನೀಡಲಾಗುತ್ತಿದೆ. ರಾಜ್ಯ ಸರ್ಕಾರದಲ್ಲಿ ಗರಿಷ್ಠ ರೂ.20.00 ಲಕ್ಷಗಳನ್ನು ಮಾತ್ರ ನೀಡಲಾಗುತ್ತದೆ. 2002 ರ ನಂತರ ಸೇವೆಗೆ ಸೇರಿದ ನೌಕರರು ಉಪಧನ ಕಾಯಿದೆಯನ್ವಯ ಮಾತ್ರ ಉಪಧನ ಪಡೆಯಲು ಅರ್ಹರು.

6. **ಪರ್ಯಾಯ ಹುದ್ದೆ** : ಅಂಗವಿಕಲ ವ್ಯಕ್ತಿಗಳ ಕಾಯ್ದೆ -1995ರಲ್ಲಿ ಸೂಚಿಸಲಾದ ಖಾಯಿಲೆಯಿಂದ ಬಳಲುತ್ತಿದ್ದು, ಕನಿಷ್ಠ ಶೇಕಡ 40 ಕ್ಕಿಂತ ಕಡಿಮೆ ಇರದ ಪ್ರಮಾಣದ ಅಂಗವಿಕಲತೆಯನ್ನು ಹೊಂದಿರುವ ನೌಕರರನ್ನು ಪರ್ಯಾಯ ಹುದ್ದೆಯಲ್ಲಿ ನಿಯೋಜಿಸಿ ಅನುಕೂಲ ಮಾಡಿಕೊಡಲಾಗುತ್ತದೆ.

7. ನಿಗಮದ ಅಂಧ ಮತ್ತು ಅಂಗವಿಕಲ ನೌಕರರಿಗೆ ವಾಹನ ಭತ್ಯೆಯ ದರವನ್ನು ಸರ್ಕಾರದಲ್ಲಿರುವಂತೆ ಅವರ ಮೂಲ ವೇತನದ ಶೇಕಡ 6 ರ ದರದಲ್ಲಿ ಯಾವುದೇ ಗರಿಷ್ಠ ಮಿತಿಯಿಲ್ಲದೆ ನೀಡಲಾಗುತ್ತಿದೆ.

8. ಬೋನಸ್ ಕಾಯಿದೆ ಅನ್ವಯ ರೂ.21,000/- ಗಳವರೆಗಿನ ವೇತನ ಪಡೆಯುತ್ತಿರುವ ಎಲ್ಲಾ ನೌಕರರಿಗೆ ಗರಿಷ್ಠ ರೂ.7000/-ಗಳ ಬೋನಸ್ ಅನ್ನು ಪಾವತಿಸಲಾಗುತ್ತದೆ.

9. **ಪ್ರೋತ್ಸಾಹ ಧನ ಯೋಜನೆ:** ಚಾಲಕ ನಿರ್ವಾಹಕರು ಸಾರಿಗೆ ಆದಾಯದ ಪ್ರೋತ್ಸಾಹ ಧನಕ್ಕೆ ಅರ್ಹರಿದ್ದು, ನಗರ/ಸಬ್‌ಅರ್ಬನ್ ಅನುಸೂಚಿಗಳ ಸಾರಿಗೆ ಆದಾಯದ ಶೇಕಡ 3 ರಷ್ಟು ಮತ್ತು ಸಾಮಾನ್ಯ, ಗ್ರಾಮಾಂತರ ಪ್ರದೇಶ, ವೇಗದೂತ, ಪ್ರತಿಷ್ಠಿತ ಸೇವೆಗಳ ಸಾರಿಗೆ ಆದಾಯದ ಶೇಕಡ 2 ರಷ್ಟನ್ನು ಪ್ರೋತ್ಸಾಹ ಧನದ ರೂಪದಲ್ಲಿ ಪಡೆಯುವರು. ವೇಗದೂತ ಸಾರಿಗೆಗಳಲ್ಲಿ ಮಾಸಿಕ ರೂ.3000/- ಗಳು ಮತ್ತು ಪ್ರತಿಷ್ಠಿತ ಸೇವೆಗಳಲ್ಲಿ ಮಾಸಿಕ ರೂ.6000/- ಗಳಷ್ಟು ಪಡೆಯುತ್ತಾರೆ.

10. **ಸ್ವಯಂ ನಿವೃತ್ತಿ ಯೋಜನೆ:** ವೈದ್ಯಕೀಯವಾಗಿ ಅಸಮರ್ಥರಾದ ನೌಕರರಿಗೆ ರೂ.6.00 ಲಕ್ಷಗಳವರೆಗಿನ ಗರಿಷ್ಠ ಮೊತ್ತದ ಹೆಚ್ಚುವರಿ ಆರ್ಥಿಕ ಸೌಲಭ್ಯದ ಐಚ್ಛಿಕ ಸ್ವಯಂ-ನಿವೃತ್ತಿ ಯೋಜನೆ ಜಾರಿಯಲ್ಲಿದೆ.

11. **ಗೃಹ ಸಾಲಕ್ಕೆ ಬಡ್ಡಿ ಸಹಾಯ ಧನ** : ನಿಗಮದ ನೌಕರರು/ಅಧಿಕಾರಿಗಳಿಗೆ ಮನೆ ಕಟ್ಟಲು / ಕೊಳ್ಳಲು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಪಡೆಯುವ ಗರಿಷ್ಠ ರೂ.5.00 ಲಕ್ಷ ಸಾಲಕ್ಕೆ ಶೇಕಡ 4 ರಷ್ಟು ಬಡ್ಡಿ ಸಹಾಯ ಧನವನ್ನು ನೀಡಲಾಗುತ್ತದೆ. ಅಂದರೆ, ವಾರ್ಷಿಕ ಗರಿಷ್ಠ ರೂ.20,000/- ಮತ್ತು ಸೇವಾವಧಿಯಲ್ಲಿ ಒಟ್ಟು ರೂ.1,00,000/- ಗಳನ್ನು ಬಡ್ಡಿ ಸಹಾಯಧನವಾಗಿ ನೀಡಲಾಗುತ್ತಿದೆ.

12. **ಶಿಶುಪಾಲನಾ ಭತ್ಯೆ:** ಮಹಿಳಾ ಸಿಬ್ಬಂದಿಗಳಿಗೆ ಮಗುವಿಗೆ 3 ವರ್ಷ ತುಂಬುವವರೆಗೆ ಮಾಸಿಕ ರೂ.1250/-ರಂತೆ ಶಿಶುಪಾಲನಾ ಭತ್ಯೆ (ಎರಡು ಮಕ್ಕಳಿಗೆ ಮಾತ್ರ) ಯನ್ನು ನೀಡಲಾಗುತ್ತಿದೆ.

13. ಬುದ್ಧಿಮಾಂದ್ಯ/ಅಂಗವಿಕಲ ಮಕ್ಕಳನ್ನು ನೋಡಿಕೊಳ್ಳಲು ಮಹಿಳಾ ನೌಕರರಿಗೆ ಒಟ್ಟು 730 ದಿವಸಗಳ "**ಶಿಶು ಪಾಲನಾ ರಜೆ**"ಯನ್ನು ವೇತನಸಹಿತವಾಗಿ ಪಡೆಯುವರು.

14. <u>ವಿಕಲ ಚೇತನ ಮಕ್ಕಳಿಗೆ ಶಿಕ್ಷಣ ಮತ್ತು ಪೋಷಣಾ ಭತ್ಯೆ:</u> ನೌಕರರ ಅವಲಂಬಿತ ಅಂಧ ಅಥವಾ ಚಲನವೈಕಲ್ಯತೆ ಹೊಂದಿರುವ ಮಕ್ಕಳ ಶಿಕ್ಷಣಕ್ಕಾಗಿ ಒಂದು ಮಗುವಿಗೆ ತಲಾ ರೂ.1000/- ಶಿಕ್ಷಣ ಭತ್ಯೆಯನ್ನು ಮತ್ತು ಅಂಗವಿಕಲತೆ ಹೊಂದಿರುವ ನೌಕರರ ಮಕ್ಕಳ ಪಾಲನೆ/ಪೋಷಣೆ ಮಾಡುವುದಕ್ಕಾಗಿ ಮಾಸಿಕ ರೂ.500/- ಗಳ ಪೋಷಣಾ ಭತ್ಯೆಯನ್ನು ನಿಗಮದ ನೌಕರರಿಗೆ ಮಂಜೂರು ಮಾಡಲಾಗುತ್ತದೆ.

15. **ಮಕ್ಕಳ ವಿದ್ಯಾಭ್ಯಾಸಕ್ಕೆ ಉಚಿತ ಪಾಸು:** ನಿಗಮದ ನೌಕರರ ಮಕ್ಕಳು ಶಾಲಾ /ಕಾಲೇಜುಗಳಿಗೆ ಪ್ರಯಾಣಿಸಲು ಉಚಿತ ಬಸ್ ಪಾಸ್ ನೀಡಲಾಗುತ್ತದೆ. ಅಲ್ಲದೆ, ಸೇವೆಯಲ್ಲಿರುವಾಗ ನಿಧನರಾದ ನೌಕರರ ಮಕ್ಕಳಿಗೂ ಸಹ ಈ ಸೌಲಭ್ಯವನ್ನು ವಿಸ್ತರಿಸಲಾಗಿದೆ.

16. **ಕೌಟುಂಬಿಕ ಪಾಸು :** ನಿಗಮದ ನೌಕರರು ವಾರ್ಷಿಕ ಒಂದು ಸಾರಿ ಮಾತ್ರ (ಒಂದು ತಿಂಗಳ ಅವಧಿಯಲ್ಲಿ ಚಾಲ್ತಿಯಲ್ಲಿರುವಂತೆ) ಕುಟುಂಬ ಸಮೇತ ಪ್ರಯಾಣಿಸಲು ಉಚಿತ ಪಾಸ್ ನೀಡಲಾಗುವುದು

17. **ಶೈಕ್ಷಣಿಕ ಸಹಾಯ ಧನ / ನಗದು ಪುರಸ್ಕಾರ :** ಎಸ್.ಎಸ್.ಎಲ್.ಸಿ ,ಪಿ.ಯು.ಸಿ ಮತ್ತು ಬಿಇ ಸೇರಿದಂತೆ ಪದವಿ ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಗಳಿಸಿದ ನೌಕರರ ಮಕ್ಕಳಿಗೆ ರೂ:2,000/- ರಿಂದ ರೂ:6,000/- ರವರೆಗೆ ನಗದು ಪುರಸ್ಕಾರವನ್ನು ನೀಡಲಾಗುತ್ತಿದೆ.

18. **ಡಿಆರ್‌ಬಿಎಫ್ ಯೋಜನೆ :** ಸದಸ್ಯ ನೌಕರರು ಮೃತಪಟ್ಟಲ್ಲಿ ವೇತನದಿಂದ ಕಡಿತವಾದ ವಂತಿಕೆ ಹಣವನ್ನು ನಿಗದಿತ ಬಡ್ಡಿ ಮತ್ತು ಹೆಚ್ಚುವರಿ ರೂ.1,50,000 ಪರಿಹಾರ ಸಮೇತ ನೀಡಲಾಗುವುದು.

19. **ನೌಕರರ ಕುಟುಂಬ ಕಲ್ಯಾಣ ಯೋಜನೆ:** ನಿಗಮದ ಆಂತರಿಕ ವಿಮಾ ಯೋಜನೆಯ ಸದಸ್ಯ ನೌಕರರು ಸೇವೆಯಲ್ಲಿರುವಾಗ ಅಕಾಲಿಕ ಮರಣ ಹೊಂದಿದ ಪಕ್ಷದಲ್ಲಿ ನಿಯಮಾನುಸಾರ ಅರ್ಹ ಉಪದನ, ಭವಿಷ್ಯನಿಧಿ, ಡಿಆರ್‌ಬಿಎಫ್ ಇತ್ಯಾದಿಗಳ ಜೊತೆಗೆ ಹೆಚ್ಚುವರಿಯಾಗಿ ರೂ: 3.00 ಲಕ್ಷಗಳ ವಿಮಾ ಹಣವನ್ನು ಅವರ ಅವಲಂಬಿತರಿಗೆ ನೀಡುವ ಮಹತ್ವದ ಯೋಜನೆ ಜಾರಿಯಲ್ಲಿರುತ್ತದೆ.

20. **ಅನುಕಂಪದ ಆಧಾರದ ಮೇಲೆ ಉದ್ಯೋಗ :** ನೌಕರರು ಸೇವೆಯಲ್ಲಿರುವಾಗ ನಿಧನರಾದ ಪಕ್ಷದಲ್ಲಿ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಒರ್ವ ಅವಲಂಬಿತರಿಗೆ ಅನುಕಂಪದ ಆಧಾರದ ನೇಮಕ ನೀಡಲಾಗುವುದು.

21. **ನಿವೃತ್ತ ನೌಕರರ ಉಚಿತ ಪಾಸು :** ದಿ.01.01.1980 ರಂದು ಮತ್ತು ನಂತರದಲ್ಲಿ ನಿವೃತ್ತರಾಗುವ ನೌಕರ ಅಥವಾ ನೌಕರಳು ಆತನ/ಅವಳ ಪತಿ/ಪತ್ನಿಗೆ ಕ್ಯಾಲೆಂಡರ್ ವರ್ಷದಲ್ಲಿ ಒಮ್ಮೆ ಕರಾರಸಾಸಂಸ್ಥೆಯ ಬಸ್ಸುಗಳು ಕಾರ್ಯಾಚರಣೆ ಮಾಡುವ ಯಾವುದೇ ಸ್ಥಳಕ್ಕೆ ಸಂಚರಿಸಲು 5 ವರ್ಷಗಳವರೆಗೆ ಉಚಿತ ಪಾಸುಗಳನ್ನು ನೀಡಲಾಗುವುದು.

    ದಿನಾಂಕ:1.1.1988 ಮತ್ತು ನಂತರ ನಿವೃತ್ತಿಯಾಗುವ ನೌಕರರಿಗೆ (ದರ್ಜೆ3 ಮತ್ತು 4) ನಗರ ಸಾರಿಗೆ ಬಸ್ಸುಗಳಲ್ಲಿ ಸಂಚರಿಸಲು ಉಚಿತ ಪಾಸುಗಳನ್ನು ನೀಡಲಾಗುತ್ತಿದೆ.

    ನಿಗಮದ ನಿವೃತ್ತ ನೌಕರರು ಮತ್ತು ಅಧಿಕಾರಿಗಳು ಪ್ರತಿ ವರ್ಷ ರೂ.500/- ಸಂಸ್ಕರಣಾ ಶುಲ್ಕ ಪಾವತಿಸಿ, ನಿವೃತ್ತ ಪಾಸ್ ಪಡೆದು ರಾಜ್ಯದ ನಾಲ್ಕು ರಸ್ತೆ ಸಾರಿಗೆ ನಿಗಮಗಳ ಸಾಮಾನ್ಯ ಮತ್ತು ವೇಗದೂತ ಬಸ್ಸುಗಳಲ್ಲಿ ಉಚಿತವಾಗಿ ಪ್ರಯಾಣಿಸಲು ಅವಕಾಶ ಕಲ್ಪಿಸಲಾಗಿದೆ.

    ನಿವೃತ್ತ ಅಧಿಕಾರಿಗಳು ಅವರ ಪತ್ನಿ/ಪತಿ ರಾಜಹಂಸ ಮತ್ತು ಹವಾನಿಯಂತ್ರಿತ ಸಾರಿಗೆಗಳು ಸೇರಿದಂತೆ ಎಲ್ಲಾ ಪ್ರತಿಷ್ಠಿತ ಸಾರಿಗೆಗಳಲ್ಲಿ ಆಯಾ ವರ್ಗದ ಪೂರಕ ಮೂಲ ಪ್ರಯಾಣದರದ ಶೇಕಡ 50 ರಷ್ಟು ಪ್ರಯಾಣ ದರ ಆಕರಿಸಿ ಪ್ರಯಾಣಿಸಲು ಅವಕಾಶ ಕಲ್ಪಿಸಲಾಗಿದೆ.

* * * * *

## ಅನುಬಂಧ–ಆ

1) ಸಾರಿಗೆ ಸಂಸ್ಥೆಗಳಿಂದ ಸಾಮಾನ್ಯ, ನಗರ ಮತ್ತು ವೇಗದೂತ ಸಾರಿಗೆಗಳಲ್ಲದೆ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ರಾಜಹಂಸ, ಐರಾವತ, ಎ.ಸಿ ಸ್ಲೀಪರ್, ನಾನ್ ಎಸಿ ಸ್ಲೀಪರ್, ಐರಾವತ ಕ್ಲಬ್ ಕ್ಲಾಸ್, ಫ್ಲೈ–ಬಸ್, ಅಂಬಾರಿ ಡ್ರೀಮ್ ಕ್ಲಾಸ್ ಮುಂತಾದ ಪ್ರತಿಷ್ಠಿತ ಸಾರಿಗೆಗಳನ್ನು ಕಾರ್ಯಾಚರಿಸಿ ರಾಜ್ಯದ ಹಾಗೂ ನೆರೆರಾಜ್ಯದ ಪ್ರಮುಖ ಸ್ಥಳಗಳಿಗೆ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ.

2) ಪ್ರಯಾಣಿಕರ ಅನುಕೂಲಕ್ಕಾಗಿ ಸರಳತೆ ಹಾಗೂ ಪಾರದರ್ಶಕತೆ ತರುವ ನಿಟ್ಟಿನಲ್ಲಿ ಈ ಕೆಳಕಂಡ ವ್ಯವಸ್ಥೆಗಳನ್ನು ಜಾರಿಗೊಳಿಸಲಾಗಿದೆ.

- ಟಿಕೇಟ್ ವಿತರಣೆಯಲ್ಲಿ ಇ.ಟಿ.ಎಂ (Electronic Ticketing Machine)
- ವಿ.ಟಿ.ಎಂ.ಎಸ್(ವೆಹಿಕಲ್ ಟ್ರ್ಯಾಕಿಂಗ್ & ಮಾನಿಟರಿಂಗ್ ಸಿಸ್ಟಮ್) ವ್ಯವಸ್ಥೆ
- ಮುಂಗಡ ಟಿಕೇಟು ಕಾಯ್ದಿರಿಸುವ ಎಂ–ಬುಕಿಂಗ್ ಮತ್ತು ಇ–ಬುಕಿಂಗ್ ವ್ಯವಸ್ಥೆ
- ಚಾಲನಾ ಸಿಬ್ಬಂದಿಯ ಮೊಬೈಲ್ ಸಂಖ್ಯೆ ಗಳನ್ನು ಎಸ್.ಎಂ.ಎಸ್. ಮೂಲಕ ಮಾಹಿತಿಯನ್ನು ಒದಗಿಸಲಾಗುತ್ತಿದೆ
- *ಎಂ–ಟಿಕೆಟನ್ನು ಲ್ಯಾಪ್‌ಟಾಪ್ ಐಪ್ಯಾಡ್/ಟ್ಯಾಬ್ಲೆಟ್* ಅಥವಾ ಮೊಬೈಲ್ ಫೋನ್‌ನಲ್ಲಿ ತೋರಿಸಿ ಪ್ರಯಾಣಿಸಲು ಅನುವು ಮಾಡಿಕೊಡಲಾಗಿದೆ
- ಬಸ್ ನಿಲ್ದಾಣಗಳಲ್ಲಿ ಬಸ್ ಮಾರ್ಗದ ಮಾಹಿತಿ ವಾಹನಗಳ ಸಂಖ್ಯೆ, ನಿರ್ಗಮನದ ವೇಳೆ, ತಲುಪುವ ಸ್ಥಳ, ಮಾರ್ಗದ ಮಾಹಿತಿಯನ್ನು ತಿಳಿಸಲು ಸಾರ್ವಜನಿಕ ಉದ್ಘೋಷಣಾ ವ್ಯವಸ್ಥೆ.
- ಬೆಂಮನಸಾ ಸಂಸ್ಥೆಯು ಸಂಚಾರ ದಟ್ಟಣೆ ಕಡಿಮೆಗೊಳಿಸುವ ಸಲುವಾಗಿ ಬಿಬಿಎಂಪಿ, ಬಿಟಿಪಿ, ನಗರ ಭೂಸಾರಿಗೆ ನಿರ್ದೇಶನಾಲಯಗಳ ಸಹಯೋಗದೊಂದಿಗೆ ಸೆಂಟ್ರಲ್ ಸಿಲ್ಕ್ ಬೋರ್ಡನಿಂದ ಟಿನ್ ಫ್ಯಾಕ್ಟರಿಯವರೆಗೆ "ಬಸ್ ಆದ್ಯತಾ ಪಥ"ವನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲಾಗಿದೆ. ಇದರಿಂದ ನಗರದ ಸಂಚಾರ ದಟ್ಟಣೆಯು ಕಡಿಮೆಯಾಗಿ, ಸಾರ್ವಜನಿಕರನ್ನು ಸಮೂಹ ಸಾರಿಗೆ ಬಳಸಲು ಉತ್ತೇಜಿಸಲಾಗುತ್ತಿದೆ.

* * * * *



ಕರ್ನಾಟಕ ಸರ್ಕಾರ

ಸಂ: ಟಿಡಿ 19 ಟಿಡಿಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ:10-03-2020

29
4/5
11/3/20

**ಇವರಿಂದ**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಾರಿಗೆ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಬಾಲಕೃಷ್ಣ. ಸಿ.ಎನ್. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 120 ಕ್ಕೆ ಉತ್ತರ ನೀಡುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಸಚಿವಾಲಯ, ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.120/2020, ದಿನಾಂಕ: 20-02-2020.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಲಾದ ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಬಾಲಕೃಷ್ಣ. ಸಿ.ಎನ್. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 120 ಕ್ಕೆ ಸಂಬಂಧಿಸಿದ 100 ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಬಿ.ನಂದಕುಮಾರ್)
ಶಾಖಾಧಿಕಾರಿ,
ಸಾರಿಗೆ ಇಲಾಖೆ-2.

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 120

ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ .ಸಿ.ಎನ್.

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 11-03-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹಾಸನ ಜಿಲ್ಲೆಯಲ್ಲಿ ಪ್ರತಿ ದಿನ ಎಷ್ಟು ಹೊಸ ವಾಹನಗಳು ನೋಂದಣಿಯಾಗುತ್ತವೆ; | ಹಾಸನ ಜಿಲ್ಲೆಯಲ್ಲಿ ಪ್ರತಿ ದಿನ ಮೋಟಾರ್ ಸೈಕಲ್, ಎಲ್.ಎಂ.ವಿ. ಹಾಗೂ ಇತರೆ ವಾಹನಗಳು ಸೇರಿ ಅಂದಾಜು 85 ರಿಂದ 90 ವಾಹನಗಳು ನೋಂದಣಿಯಾಗುತ್ತವೆ. |
| (ಆ) | ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಎಷ್ಟು ಹೊಸ ವಾಹನಗಳು ಪ್ರತಿದಿನ ನೋಂದಣಿಯಾಗುತ್ತಿವೆ; (ವಿವರ ನೀಡುವುದು) | ಚನ್ನರಾಯಪಟ್ಟಣ ತಾಲ್ಲೂಕಿನ ಎಲ್ಲಾ ವರ್ಗಗಳ ವಾಹನಗಳು ಸೇರಿ ಪ್ರತಿದಿನ ಅಂದಾಜು 15 ರಿಂದ 20 ವಾಹನಗಳು ನೋಂದಣಿಯಾಗುತ್ತಿವೆ. |
| (ಇ) | ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಎ.ಆರ್.ಟಿ.ಓ. ಕಛೇರಿಯನ್ನು ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಚನ್ನರಾಯಪಟ್ಟಣ ತಾಲ್ಲೂಕು ಕೇಂದ್ರದಲ್ಲಿ ಹೊಸದಾಗಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾರಂಭಿಸುವ ಸಂಬಂಧವಾಗಿ ನಿಗಧಿಪಡಿಸಿರುವ ಮಾನದಂಡಗಳನ್ವಯ ಪರಿಶೀಲಿಸಿ, ಸೂಕ್ತ ಕ್ರಮಕೈಗೊಳ್ಳಲಾಗುವುದು. |
| (ಈ) | ಹೊಸ ಎ.ಆರ್.ಟಿ.ಓ. ಕಛೇರಿಯನ್ನು ತೆರೆಯಲು ಸ್ಥಳ ಗುರುತಿಸಲಾಗಿದೆಯೇ; ಹಾಗಿದ್ದಲ್ಲಿ, ಚನ್ನರಾಯಪಟ್ಟಣದ ಯಾವ ಭಾಗದಲ್ಲಿ ಸ್ಥಳ ಗುರುತಿಸಲಾಗಿದೆ? | |

ಟಿಡಿ 19 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 120

ಸದಸ್ಯರ ಹೆಸರು : ಶ್ರೀ ಬಾಲಕೃಷ್ಣ .ಸಿ.ಎನ್.

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 11-03-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹಾಸನ ಜಿಲ್ಲೆಯಲ್ಲಿ ಪ್ರತಿ ದಿನ ಎಷ್ಟು ಹೊಸ ವಾಹನಗಳು ನೋಂದಣಿಯಾಗುತ್ತವೆ; | ಹಾಸನ ಜಿಲ್ಲೆಯಲ್ಲಿ ಪ್ರತಿ ದಿನ ಮೋಟಾರ್ ಸೈಕಲ್, ಎಲ್.ಎಂ.ವಿ. ಹಾಗೂ ಇತರೆ ವಾಹನಗಳು ಸೇರಿ ಅಂದಾಜು 85 ರಿಂದ 90 ವಾಹನಗಳು ನೋಂದಣಿಯಾಗುತ್ತವೆ. |
| (ಆ) | ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಎಷ್ಟು ಹೊಸ ವಾಹನಗಳು ಪ್ರತಿದಿನ ನೋಂದಣಿಯಾಗುತ್ತಿವೆ; (ವಿವರ ನೀಡುವುದು) | ಚನ್ನರಾಯಪಟ್ಟಣ ತಾಲ್ಲೂಕಿನ ಎಲ್ಲಾ ವರ್ಗಗಳ ವಾಹನಗಳು ಸೇರಿ ಪ್ರತಿದಿನ ಅಂದಾಜು 15 ರಿಂದ 20 ವಾಹನಗಳು ನೋಂದಣಿಯಾಗುತ್ತಿವೆ. |
| (ಇ) | ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಎ.ಆರ್.ಟಿ.ಓ. ಕಛೇರಿಯನ್ನು ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಚನ್ನರಾಯಪಟ್ಟಣ ತಾಲ್ಲೂಕು ಕೇಂದ್ರದಲ್ಲಿ ಹೊಸದಾಗಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾರಂಭಿಸುವ ಸಂಬಂಧವಾಗಿ ನಿಗಧಿಪಡಿಸಿರುವ ಮಾನದಂಡಗಳನ್ವಯ ಪರಿಶೀಲಿಸಿ, ಸೂಕ್ತ ಕ್ರಮಕೈಗೊಳ್ಳಲಾಗುವುದು. |
| (ಈ) | ಹೊಸ ಎ.ಆರ್.ಟಿ.ಓ. ಕಛೇರಿಯನ್ನು ತೆರೆಯಲು ಸ್ಥಳ ಗುರುತಿಸಲಾಗಿದೆಯೇ; ಹಾಗಿದ್ದಲ್ಲಿ, ಚನ್ನರಾಯಪಟ್ಟಣದ ಯಾವ ಭಾಗದಲ್ಲಿ ಸ್ಥಳ ಗುರುತಿಸಲಾಗಿದೆ? | |

ಟಿಡಿ 19 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು



ಕರ್ನಾಟಕ ಸರ್ಕಾರ

ಸಂ: ಟಿಡಿ 74 ಟಿಸಿಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 11.03.2020.

01
Q15
11/3/20

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ಸಾರಿಗೆ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

**ವಿಷಯ**: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಭಯ್ ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1382 ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ**: ತಮ್ಮ ಪತ್ರ ಸಂಖ್ಯೆ:ವಿಸಪ್ರಶಾ/15 ನೇವಿಸ/6ಅ/ಚುಗು-ಚುರ.ಪ್ರಶ್ನೆ /05/2020, ದಿನಾಂಕ: 02.03.2020

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಭಯ್ ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1382 ಕ್ಕೆ ದಿನಾಂಕ:11.03.2020ರಂದು ಸದನದಲ್ಲಿ ಉತ್ತರ ನೀಡುವ ಸಲುವಾಗಿ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

Mala S

**(ಮಾಲಾ ಎಸ್.)**
ಶಾಖಾಧಿಕಾರಿ,
ಸಾರಿಗೆ-1 ಶಾಖೆ, ಸಾರಿಗೆ ಇಲಾಖೆ

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1382
ಸದಸ್ಯರ ಹೆಸರು : ಶ್ರೀ ಅಭಯ್ ಪಾಟೀಲ್ (ಬೆಳಗಾವಿ ದಕ್ಷಿಣ)
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 11-03-2020

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿರುವ ಘಟಕಗಳು ಯಾವುದು; ಪ್ರತಿ ಘಟಕದಲ್ಲಿರುವ ವಿವಿಧ ಬಗೆಯ ವಾಹನಗಳ ಸಂಖ್ಯೆ ಎಷ್ಟು; (ಸಾರಿಗೆ ಸಂಸ್ಥೆವಾರು, ಘಟಕವಾರು ಮಾಹಿತಿ ನೀಡುವುದು) | ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗಳಲ್ಲಿನ ಘಟಕಗಳಲ್ಲಿರುವ ವಿವಿಧ ಮಾದರಿಯ ವಾಹನಗಳ ವಿವರಗಳನ್ನು ಈ ಕೆಳಕಂಡಂತೆ ಅನುಬಂಧದಲ್ಲಿ ಒದಗಿಸಿದೆ. |

| ಸಂಸ್ಥೆ | ವಿವರ |
|---|---|
| ಕ.ರಾ.ರ.ಸಾ.ನಿಗಮ | ಅನುಬಂಧ-ಅ |
| ಬೆಂ.ಮ.ಸಾ.ಸಂಸ್ಥೆ | ಅನುಬಂಧ-ಆ |
| ವಾ.ಕ.ರ.ಸಾ.ಸಂಸ್ಥೆ | ಅನುಬಂಧ-ಇ |
| ಈ.ಕ.ರ.ಸಾ.ಸಂಸ್ಥೆ | ಅನುಬಂಧ-ಈ |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದ ಪ್ರತಿ ಘಟಕದಿಂದ ಪ್ರತಿದಿನ ಪಾವತಿಸುತ್ತಿರುವ ಟೋಲ್ ಹಣವೆಷ್ಟು; (ಘಟಕವಾರು, ವಿಭಾಗವಾರು, ಸಂಸ್ಥೆವಾರು ವಿವರ ನೀಡುವುದು) | ರಾಜ್ಯದ ಪ್ರತಿ ಘಟಕದಿಂದ ಪಾವತಿಸುತ್ತಿರುವ ಸಂಸ್ಥೆವಾರು ಟೋಲ್ ಹಣದ ವಿವರ ಈ ಕೆಳಕಂಡಂತಿದ್ದು, ವಿಭಾಗವಾರು, ಘಟಕವಾರು ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |

| ಸಂಸ್ಥೆ | ಪಾವತಿಸುತ್ತಿರುವ ಟೋಲ್ ಮೊತ್ತ |
|---|---|
| ಕ.ರಾ.ರ.ಸಾ.ನಿಗಮ | 18,40,159/ – |
| ಬೆಂ.ಮ.ಸಾ.ಸಂಸ್ಥೆ | 2,31,307/ – |
| ವಾ.ಕ.ರ.ಸಾ.ಸಂಸ್ಥೆ | 10,38,298/– |
| ಈ.ಕ.ರ.ಸಾ.ಸಂಸ್ಥೆ | 7,37,559/– |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಟೋಲ್ ಹಣದ ಪಾವತಿಯಿಂದ ಸಂಸ್ಥೆಗೆ ನಷ್ಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸಾರಿಗೆ ಸಂಸ್ಥೆಯು ಸಾರ್ವಜನಿಕ ಹಿತಾಸಕ್ತಿಯನ್ನು ಕಾಪಾಡುವ ಸಂಸ್ಥೆಯಾಗಿರುವುದರಿಂದ ರಾಷ್ಟ್ರೀಯ & ರಾಜ್ಯ ಹೆದ್ದಾರಿಗಳಲ್ಲಿ ಸಂಚರಿಸುವ ವಾಹನಗಳಿಗೆ ಟೋಲ್ ಪಾವತಿಯಿಂದ ವಿನಾಯಿತಿ ಪಡೆಯಲು ಸರ್ಕಾರವು ಯಾವ ಕ್ರಮವನ್ನು ಅನುಸರಿಸಿದೆ; | ನಾಲ್ಕೂ ಸಾರಿಗೆ ಸಂಸ್ಥೆಯ ವಾಹನಗಳಿಗೆ ಟೋಲ್‌ಗಳಲ್ಲಿ ಪಾವತಿಸುವ ಬಳಕೆದಾರರ ಶುಲ್ಕದಿಂದ ವಿನಾಯಿತಿ ನೀಡುವಂತೆ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರವನ್ನು ಕೋರಲಾಗಿತ್ತು. ಆದರೆ ವಾಹನಗಳಿಗೆ ಟೋಲ್ ಶುಲ್ಕ ಪಾವತಿಯಿಂದ ವಿನಾಯಿತಿ ನೀಡಲು ಅವಕಾಶವಿರುವುದಿಲ್ಲ ಎಂದು ತಿಳಿಸಿರುತ್ತಾರೆ. |
| ಈ) | ಸಂಸ್ಥೆಯು ಕಲ್ಪಿಸಿದ ವಿವಿಧ ರಿಯಾಯಿತಿ ಪಾಸುಗಳು ಯಾವುವು; ಅವುಗಳಿಗೆ ಇರಬೇಕಾಗಿರುವ ಮಾನದಂಡಗಳೇನು; ಸಂಸ್ಥೆಯು ನೀಡಿದ ಪಾಸುಗಳಿಗೆ ಸಂಬಂಧಪಟ್ಟಂತೆ ಸರ್ಕಾರವು ಭರಿಸಬೇಕಾದ ರಿಯಾಯಿತಿ ಹಣವನ್ನು ದಿನಾಂಕ: 01-01-2018 ರಿಂದ 31-01-2020 ವರೆಗೆ ಎಷ್ಟು ಹಣವನ್ನು ಸಂಸ್ಥೆಗೆ ಭರಿಸಲಾಗಿದೆ; ಇಲ್ಲವಾದಲ್ಲಿ ಕಾರಣವೇನು; ಇದರ ಬಗೆಗೆ ಸರ್ಕಾರದ ನಿಲುವು ಏನು ಹಾಗೂ ಸಂಸ್ಥೆಯು ಯಾವ ಕ್ರಮವನ್ನು ಕೈಗೊಳ್ಳಲಾಗಿದೆ; | ಸಾರಿಗೆ ಸಂಸ್ಥೆಗಳಿಂದ ಈ ಕೆಳಕಂಡಂತೆ ರಿಯಾಯಿತಿ/ಉಚಿತ ಪಾಸುಗಳನ್ನು ವಿತರಿಸಲಾಗುತ್ತಿದೆ.<br>1. ವಿದ್ಯಾರ್ಥಿ ರಿಯಾಯಿತಿ ಪಾಸು<br>2. ವಿಕಲಚೇತನರ ರಿಯಾಯಿತಿ ಪಾಸು<br>3. ಅಂಧರ ಉಚಿತ ಪಾಸು<br>4. ಸ್ವಾತಂತ್ರ್ಯಹೋರಾಟಗಾರರ ಉಚಿತ ಪಾಸು<br>5. ಸ್ವಾತಂತ್ರ್ಯಹೋರಾಟಗಾರರ ಪತ್ನಿ / ವಿಧವಾ ಪತ್ನಿಯರ ಉಚಿತ ಪ್ರಯಾಣ ಕೂಪನ್<br>6. ಹುತಾತ್ಮ ಯೋಧರ ಅವಲಂಬಿತರ ಉಚಿತ ಪಾಸ್<br>7. ಎಂಡೋಸಲ್ಫಾನ್‌ಪೀಡಿತರ ಉಚಿತ ಪಾಸ್<br>8. ಗೋವಾ ಚಳುವಳಿಗಾರರ ಉಚಿತ ಪಾಸ್ |

| | | |
|---|---|---|
| | | ಸದರಿ ಪಾಸುಗಳ ವಿತರಣೆಯಲ್ಲಿ ಅನುಸರಿಸಲಾಗುತ್ತಿರುವ ಮಾನದಂಡಗಳನ್ನು **<u>ಅನುಬಂಧ-2</u>**ರಲ್ಲಿ ಹಾಗೂ ಪಾಸ್ ವಿತರಣೆ ಸಂಬಂಧ ಸರ್ಕಾರದಿಂದ ಭರಿಸಲಾಗಿರುವ ಸಹಾಯಧನದ ವಿವರಗಳನ್ನು **<u>ಅನುಬಂಧ-3</u>**ರಲ್ಲಿ ನೀಡಲಾಗಿದೆ. |
| ಉ) | ಸಾರಿಗೆ ಸಂಸ್ಥೆಯ ವಾಹನಗಳಿಗೆ ಒದಗಿಸುತ್ತಿರುವ ಇಂಧನಕ್ಕೆ ತೆರಿಗೆ ವಿನಾಯತಿಯನ್ನು ಪಡೆಯಲು ಸರ್ಕಾರವು ಯಾವುದಾದೂ ಕ್ರಮವನ್ನು ಕೈಗೊಳ್ಳಲಾಗಿದೆಯೇ; ಇಲ್ಲವಾದಲ್ಲಿ ರಿಯಾಯತಿಯನ್ನು ಪಡೆಯಲು ಸರ್ಕಾರವು ಯಾವ ಕ್ರಮವನ್ನು ಕೈಗೊಳ್ಳಲಾಗುವುದು? | ಪರಿಶೀಲನೆಯಲ್ಲಿದೆ. |

ಸಂಖ್ಯೆ: ಟಿಡಿ 74 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

ಅನುಬಂಧ-ಆ

## Division & Depot wise vehicles held AS ON 05.03.2020

| Sl No | Division | Depot | Sch. | Veh. | CITY | Gramantharasarige | Karnataka Sarige | Raja Hamsa | Viabhav | Sleeper (Non AC) | CORONA | VOLVO | VOLVO MA | VOLVO CITY | VOLVO SLEEPER | Mercides Benz | SCANIA | TOTAL |
|---|---|---|---|---|---|---|---|---|---|---|---|---|---|---|---|---|---|---|
| 1 | BNG (C) | D-1 | 123 | 141 | | | | 67 | | 67 | 7 | | | | | | | 141 |
| | | D-2 | 123 | 133 | | | | | | | 31 | 4 | 31 | | 25 | 27 | 15 | 133 |
| | | D-4 | 125 | 150 | | | | | | | | 17 | 91 | | 7 | | 35 | 150 |
| | | D-5 | 108 | 116 | | | 116 | | | | | | | | | | | 116 |
| | | D-6 | 109 | 121 | 10 | | 109 | | | | | | | 2 | | | | 121 |
| | | NMG | 74 | 78 | | 42 | 36 | | | | | | | | | | | 78 |
| | | **Divn.** | **662** | **739** | **10** | **42** | **261** | **67** | | **67** | **38** | **21** | **122** | **2** | **32** | **27** | **50** | **739** |
| 2 | RNG | KKP | 108 | 113 | | 27 | 86 | | | | | | | | | | | 113 |
| | | AKL | 76 | 80 | | 21 | 59 | | | | | | | | | | | 80 |
| | | CPT | 83 | 86 | | 22 | 64 | | | | | | | | | | | 86 |
| | | HRL | 66 | 70 | | 9 | 61 | | | | | | | | | | | 70 |
| | | RNG | 88 | 96 | 18 | 19 | 59 | | | | | | | | | | | 96 |
| | | MGD | 78 | 82 | | 18 | 64 | | | | | | | | | | | 82 |
| | | **Divn.** | **499** | **527** | **18** | **116** | **393** | | | | | | | | | | | **527** |
| 3 | TMK | TMK-1 | 97 | 101 | 54 | 7 | 40 | 0 | | | | | | | | | | 101 |
| | | TMK-2 | 125 | 133 | 29 | 9 | 84 | 11 | | | | | | | | | | 133 |
| | | KGL | 85 | 85 | 4 | 5 | 76 | 0 | | | | | | | | | | 85 |
| | | TVK | 102 | 101 | 0 | 4 | 97 | 0 | | | | | | | | | | 101 |
| | | TPT | 71 | 72 | 0 | 7 | 65 | 0 | | | | | | | | | | 72 |
| | | SIRA | 79 | 83 | 0 | 12 | 71 | 0 | | | | | | | | | | 83 |
| | | MDG | 60 | 61 | 9 | 13 | 39 | 0 | | | | | | | | | | 61 |
| | | **Divn.** | **619** | **636** | **96** | **57** | **472** | **11** | | | | | | | | | | **636** |
| 4 | KLR | KLR | 148 | 155 | 27 | 18 | 105 | 4 | 1 | | | | | | | | | 155 |
| | | KGF | 126 | 131 | 13 | 7 | 101 | 9 | 1 | | | | | | | | | 131 |
| | | SRP | 104 | 108 | 0 | 1 | 103 | 4 | 0 | | | | | | | | | 108 |
| | | MLR | 85 | 89 | 0 | 15 | 74 | 0 | 0 | | | | | | | | | 89 |
| | | MBL | 94 | 98 | 0 | 5 | 93 | 0 | 0 | | | | | | | | | 98 |
| | | **Divn.** | **557** | **581** | **40** | **46** | **476** | **17** | **2** | | | | | | | | | **581** |
| 5 | CBP | CBP | 139 | 147 | 14 | 2 | 128 | 2 | 1 | | | | | | | | | 147 |
| | | CNT | 137 | 145 | | 19 | 126 | | | | | | | | | | | 145 |
| | | BGP | 98 | 103 | | 1 | 95 | 5 | 2 | | | | | | | | | 103 |
| | | GBR | 99 | 103 | | 6 | 97 | | | | | | | | | | | 103 |
| | | DBP | 93 | 98 | 2 | 27 | 69 | | | | | | | | | | | 98 |
| | | **Divn.** | **566** | **596** | **16** | **55** | **515** | **7** | **3** | **0** | **0** | **0** | **0** | **0** | **0** | **0** | **0** | **596** |
| 6 | MYS(C) | BMT | 98 | 110 | 62 | | 12 | | | | | | | 36 | | | | 110 |
| | | KVP | 120 | 125 | 114 | | 11 | | | | | | | | | | | 125 |
| | | SGH | 110 | 113 | 110 | | 3 | | | | | | | | | | | 113 |
| | | VJN | 97 | 100 | 98 | | 2 | | | | | | | | | | | 100 |
| | | **Divn.** | **425** | **448** | **384** | | **28** | | | | | | | **36** | | | | **448** |
| 7 | MYS(R) | D-1 | 125 | 129 | 1 | 5 | 122 | 1 | | | | | | | | | | 129 |
| | | D-2 | 96 | 110 | | | | 23 | | 2 | | 25 | 44 | | 2 | | 14 | 110 |
| | | D-3 | 82 | 84 | | | 80 | 4 | | | | | | | | | | 84 |
| | | KRN | 109 | 114 | 3 | 10 | 95 | 6 | | | | | | | | | | 114 |
| | | HNS | 98 | 101 | 5 | 10 | 85 | 1 | | | | | | | | | | 101 |
| | | HDK | 98 | 101 | 8 | 12 | 80 | 1 | | | | | | | | | | 101 |
| | | P.Patna | 63 | 67 | 3 | 8 | 55 | 1 | | | | | | | | | | 67 |
| | | **Divn.** | **671** | **706** | **20** | **45** | **517** | **37** | | **2** | | **25** | **44** | | **2** | | **14** | **706** |

| | | | | | | |
|---|---|---|---|---|---|---|
| 44 | ಮುಧೋಳ | ಮಹಾಲಿಂಗಪೂರ ಬುದ್ನಿ ಪಿ ಡಿ | ಸ್ವಂತ | – | | ಇದೆ |
| 45 | ಮುಧೋಳ | ಸಮಗಾರ ಗಲ್ಲಿ, ವಾ.ಸಂ 17 | – | ಬಾಡಿಗೆ | | ಇದೆ |
| 46 | ಮುಧೋಳ | ಹರಿಜನ ಕೇರಿ ಮಹಾಲಿಂಗಪೂರ | – | ಬಾಡಿಗೆ | | ಇದೆ |
| 47 | ಮುಧೋಳ | ಟೋಣಪಿನಾಥ ಗುಡಿ ವಾ.ಸಂ 10 | – | ಬಾಡಿಗೆ | | ಇದೆ |
| 48 | ಮುಧೋಳ | ಅಂಬೇಡ್ಕರ ಭವನ ವಾ.ಸಂ 13 | – | ಬಾಡಿಗೆ | – | ಇದೆ |
| 49 | ಮುಧೋಳ | ಕಣವ್ವನಕಟ್ಟಿ ವಾ.ಸಂ 16 | – | – | ಸಮುದಾಯ ಭವನ | ಇದೆ |
| 50 | ಮುಧೋಳ | ಭಜಂತ್ರಿಗಲ್ಲಿ–01 ವಾ.ಸಂ 08 | – | – | ಸಮುದಾಯ ಭವನ | ಇದೆ |
| 51 | ಮುಧೋಳ | ನೀಲಕಂಠೇಶ್ವರ ಮಠ, ವಾ.ಸಂ 07 | ಸ್ವಂತ | – | | ಇದೆ |
| 52 | ಮುಧೋಳ | ಕರಿದೇವರ ಗುಡಿ ವಾ.ಸಂ 06 | – | ಬಾಡಿಗೆ | | ಇದೆ |
| 53 | ಮುಧೋಳ | ಬನಶಂಕರಗುಡಿ ವಾ.ಸಂ 05 | – | ಬಾಡಿಗೆ | | ಇದೆ |
| 54 | ಮುಧೋಳ | ಬಣದಲಕ್ಷ್ಮೀ ಗುಡಿ ವಾ.ಸಂ 03 | – | ಬಾಡಿಗೆ | | ಇದೆ |
| 55 | ಮುಧೋಳ | ಚೌಕಿಮಠ ವಾ.ಸಂ 02 | – | ಬಾಡಿಗೆ | | ಇದೆ |
| 56 | ಮುಧೋಳ | ಪೆಂಡಾರಿಗಲ್ಲಿವಾ.ಸಂ 03 | – | ಬಾಡಿಗೆ | | ಇದೆ |
| 57 | ಮುಧೋಳ | ಗಡಾದಗಲ್ಲಿವಾ.ಸಂ 11 | – | ಬಾಡಿಗೆ | | ಇದೆ |
| 58 | ಮುಧೋಳ | ಯಲ್ಲಮ್ಮನಗುಡಿ ವಾ.ಸಂ 06 | – | ಬಾಡಿಗೆ | | ಇದೆ |
| 59 | ಮುಧೋಳ | ಮಲ್ಲಯ್ಯನ ಗುಡಿವಾ.ಸಂ 12 | – | ಬಾಡಿಗೆ | | ಇದೆ |
| 60 | ಮುಧೋಳ | ಲಕ್ಷ್ಮೀಗುಡಿ ಅಂಬೇಡ್ಕರ ಸರ್ಕಲ ಹತ್ತಿರವಾ.ಸಂ 22 | – | ಬಾಡಿಗೆ | | ಇದೆ |
| 61 | ಮುಧೋಳ | ಕೆಂಗೇರಿ ಮಡ್ಡಿ ಕೆನಾಲ ಹರಿಯ ವಾ.ಸಂ 21 | ಸ್ವಂತ | | | ಇದೆ |
| 62 | ಮುಧೋಳ | ಕೇಂಗೇರಿಮಡ್ಡಿಸಾಯಿ ಮಂದಿರವಾ.ಸಂ 14 | ಸ್ವಂತ | | | ಇದೆ |
| 63 | ಮುಧೋಳ | ಆಯಿಲಮಿಲ್ಲ ಪ್ಲಾಟವಾ.ಸಂ 23 | – | ಬಾಡಿಗೆ | | ಇದೆ |
| 64 | ಮುಧೋಳ | ಬುದ್ನಿ ಪಿ ಡಿ ವಾ.ಸಂ 09 | – | – | ಸಮುದಾಯ ಭವನ | ಇದೆ |

| | | | | | | |
|---|---|---|---|---|---|---|
| 65 | ಮುಧೋಳ | ಡಚ್ ಕಾಲನಿ ವಾ.ಸಂ 18 | – | – | ಕಾರ್ಪೋರೇಷನ | ಇದೆ |
| 66 | ಮುಧೋಳ | ಹಮಾಲ ಕಾಲನಿ ವಾ.ಸಂ 13 | ಸ್ವಂತ | – | – | ಇದೆ |
| 67 | ಮುಧೋಳ | ಸಿಕ್ಕಲಗಾರ ಓನಿ ವಾ.ಸಂ 13 | – | ಬಾಡಿಗೆ | | ಇದೆ |
| 68 | ಮುಧೋಳ | ಚಿಮ್ಮಡಗಲ್ಲಿ ವಾ.ಸಂ 18 | – | ಬಾಡಿಗೆ | | ಇದೆ |
| 69 | ಮುಧೋಳ | ಬಸವನಗರ ವಾ.ಸಂ 18 ಅಂಜನೇಯ ಗುಡಿ | – | – | ಇತರೆ | ಇದೆ |
| 70 | ಮುಧೋಳ | ಮದಿನಾ ಗಲ್ಲಿ ವಾ.ಸಂ 17 | – | ಬಾಡಿಗೆ | ಇತರೆ | ಇದೆ |
| 71 | ಮುಧೋಳ | ಪೋಲೀಸ್ ಸ್ಟೇಷನ ವಾ.ಸಂ 9 | – | – | ಇತರೆ | ಇದೆ |
| 72 | ಮುಧೋಳ | ಕೆ ಇ ಬಿ ಮಿನಿ ವಾ.ಸಂ 20 | – | – | ಇತರೆ | ಇದೆ |
| 73 | ಮುಧೋಳ | ಮಹಾಲಿಂಗಪೂರ ಬುದ್ನಿ ಪಿ ಡಿ | | | ಸಮುದಾಯ ಭವನ | ಇದೆ |
| 74 | ಜಮಖಂಡಿ | ಹಿಪ್ಪರಗಿ/ವ್ಯೈಗೂರ ಹಾಳ | – | – | – | ಇದೆ |
| 75 | ಜಮಖಂಡಿ | ಹಿಪ್ಪರಗಿ/ಚಾವಡಿ ಓಣಿ | – | – | – | ಇದೆ |
| 76 | ಜಮಖಂಡಿ | ಹಿಪ್ಪರಗಿ/ಮುಸ್ಲಿಂಓಣಿ | – | – | – | ಇದೆ |
| 77 | ಜಮಖಂಡಿ | ಹಿಪ್ಪರಗಿ/ಶಾಂತಿ ನಗರ | – | – | – | ಇದೆ |
| 78 | ಜಮಖಂಡಿ | ಹಿಪ್ಪರಗಿ/ನಾಗರಾಳತೋಟ | – | – | – | ಇದೆ |
| 79 | ಜಮಖಂಡಿ | ಹಿಪ್ಪರಗಿ/ಕಿತ್ತೂರ ತೋಟ | – | – | – | ಇದೆ |
| 80 | ಜಮಖಂಡಿ | ಹಿಪ್ಪರಗಿ/ಸಿಮಿಲಕ್ಕವ್ವನ ತೋಟ | – | – | – | ಇದೆ |
| 81 | ಜಮಖಂಡಿ | ಹಿಪ್ಪರಗಿ/ಹಳೇಪೂರ ಮಠ | – | – | – | ಇದೆ |
| 82 | ಜಮಖಂಡಿ | ಕುಲ್ಲಹಳ್ಳಿ/ಹಟ್ಟಿ ಓಣಿ | – | – | – | ಇದೆ |
| 83 | ಜಮಖಂಡಿ | ಹಿಪ್ಪರಗಿ/ಚಂದ್ರಾದೇವಿ ಓಣಿ | – | – | – | ಇದೆ |
| 84 | ಜಮಖಂಡಿ | ಕುಲ್ಲಹಳಿ/ತಳವಾರ ತೋಟ | – | – | – | ಇದೆ |
| 85 | ಜಮಖಂಡಿ | ಕುಲ್ಲಳ್ಳಿ/ಹಿರೇಓಣಿ | – | – | – | ಇದೆ |
| 86 | ಜಮಖಂಡಿ | ಕುಲ್ಲಳ್ಳಿ/ಕಟಬರ್ ಓಣಿ | – | – | – | ಇದೆ |
| 87 | ಜಮಖಂಡಿ | ಕುಲ್ಲಹಳ್ಳಿ/ಹರಿಜನಕೇರಿ | – | – | – | ಇದೆ |

| | | | | | | |
|---|---|---|---|---|---|---|
| 88 | ಜಮಖಂಡಿ | ಕುಲ್ಲಹಳ್ಳಿ/ಮಾದರ ಓಣಿ | – | – | – | ಇದೆ |
| 89 | ಜಮಖಂಡಿ | ಕುಲ್ಲಹಳ್ಳಿ/ಗೊಂಬಿ ಗುಡ್ಡ | – | – | – | ಇದೆ |
| 90 | ಜಮಖಂಡಿ | ಕುಲ್ಲಹಳ್ಳಿ/ಬಾವಿಮಡ್ಡಿ | – | – | – | ಇದೆ |
| 91 | ಜಮಖಂಡಿ | ಕುಲ್ಲಹಳ್ಳಿ/ಹಿಪ್ಪರಗಿ ರೋಡ | – | – | – | ಇದೆ |
| 92 | ಜಮಖಂಡಿ | ಕುಲ್ಲಳ್ಳಿ ಜನತಾ ಪ್ಲಾಟ | – | – | – | ಇದೆ |
| 93 | ಜಮಖಂಡಿ | ಸಸಾಲಟ್ಟಿ/ಕನ್ನಡ ಶಾಲೆ ಹತ್ತಿರ | – | – | – | ಇದೆ |
| 94 | ಜಮಖಂಡಿ | ಸಸಾಲಟ್ಟಿ/ಹರಿಜನಕೇರಿ | – | – | – | ಇದೆ |
| 95 | ಜಮಖಂಡಿ | ಸಸಾಲಟ್ಟಿ/ಹುಕ್ಕೇರಿ ತೋಟ | – | – | – | ಇದೆ |
| 96 | ಜಮಖಂಡಿ | ಸಸಾಲಟ್ಟಿ/ಮುರಪಾಟಾ | – | – | – | ಇದೆ |
| 97 | ಜಮಖಂಡಿ | ಸಸಾಲಟ್ಟಿ/ಸಲಬನ್ನವರ ತೋಟ | – | – | – | ಇದೆ |
| 98 | ಜಮಖಂಡಿ | ಸಸಾಲಟ್ಟಿ/ಕೂಪ್ಪದ ತೋಟ | – | – | – | ಇದೆ |
| 99 | ಜಮಖಂಡಿ | ಸಸಾಲಟ್ಟಿ/ಹಿಡಕಲ್ ರೋಡ | – | – | – | ಇದೆ |
| 100 | ಜಮಖಂಡಿ | ಸಸಾಲಟ್ಟಿ/ಬಿರೇಶ್ವರ ಕೇಂದ್ರ | – | – | – | ಇದೆ |
| 101 | ಜಮಖಂಡಿ | ಗೋಲಬಾಂವಿ/ಪಂಚಾಯತಿ ಹತ್ತಿರ | – | – | – | ಇದೆ |
| 102 | ಜಮಖಂಡಿ | ಗೋಲಬಾಂವಿ/ಹರಿಜನಕೇರಿ | – | – | – | ಇದೆ |
| 103 | ಜಮಖಂಡಿ | ಗೋಲಬಾಂವಿ/ಗುರವ ತೋಟ | – | – | – | ಇದೆ |
| 104 | ಜಮಖಂಡಿ | ಗೋಲಬಾಂವಿ/ರೇಳೆಕರ ತೋಟ | – | – | – | ಇದೆ |
| 105 | ಜಮಖಂಡಿ | ಗೋಲಬಾಂವಿ/ವೀರಬದ್ರೇಶ್ವರ ತೋಟ | – | – | – | ಇದೆ |
| 106 | ಜಮಖಂಡಿ | ಗೋಲಬಾಂವಿ/ಬೀರಪ್ಪನ ಗುಡಿ | – | – | – | ಇದೆ |
| 107 | ಜಮಖಂಡಿ | ಕಾಲತಿಪ್ಪಿ ತೋಟದ ಏರಿಯಾ | – | – | – | ಇದೆ |
| 108 | ಜಮಖಂಡಿ | ಕಾಲತಿಪ್ಪಿ ಶಾಲೆ ಏರಿಯಾ | – | – | – | ಇದೆ |
| 109 | ಜಮಖಂಡಿ | ಪಾಟೀಲ ವಸ್ತಿ / ಗೋಲಬಾವಿ | – | – | – | ಇದೆ |
| 110 | ಜಮಖಂಡಿ | ಹನಗಂಡಿ/ಲಾಳಕೆ ಓಣಿ | – | – | – | ಇದೆ |

| | | | | | | |
|---|---|---|---|---|---|---|
| 111 | ಜಮಖಂಡಿ | ಹನಗಂಡಿ/ಪೂಜಾರಿ ಓಣಿ | – | – | – | ಇದೆ |
| 112 | ಜಮಖಂಡಿ | ಹನಗಂಡಿ/ಜನತಾ ಪ್ಲಾಟ | – | – | – | ಇದೆ |
| 113 | ಜಮಖಂಡಿ | ಹರಿಜನಕೇರಿ/ಹನಗಂಡಿ | – | – | – | ಇದೆ |
| 114 | ಜಮಖಂಡಿ | ಹನಗಂಡಿ/ತೋಟದ ಏರಿಯಾ | – | – | – | ಇದೆ |
| 115 | ಜಮಖಂಡಿ | ಹನಗಂಡಿ/ದಸ್ತಗಿರತೋಟ | – | – | – | ಇದೆ |
| 116 | ಜಮಖಂಡಿ | ಯರಗಟ್ಟಿ/ಶಾಲೆ ಹತ್ತಿರ | – | – | – | ಇದೆ |
| 117 | ಜಮಖಂಡಿ | ಯರಗಟ್ಟಿ/ಕಳ್ಳಿಗುದ್ದಿ ತೋಟ | – | – | – | ಇದೆ |
| 118 | ಜಮಖಂಡಿ | ಹಳಿಂಗಳಿ/ಲಕ್ಕವ್ವನ ಗುಡಿ | – | – | – | ಇದೆ |
| 119 | ಜಮಖಂಡಿ | ಹಳಿಂಗಳಿ/ಮೇಲಿನ ಓಣಿ | – | – | – | ಇದೆ |
| 120 | ಜಮಖಂಡಿ | ಹಳಿಂಗಳಿ/ಬಸವೇಶ್ವರ ನಗರ | – | – | – | ಇದೆ |
| 121 | ಜಮಖಂಡಿ | ಹಳಿಂಗಳಿ/ಗುಡ್ಡದ ಏರಿಯಾ | – | – | – | ಇದೆ |
| 122 | ಜಮಖಂಡಿ | ಹಳಿಂಗಳಿ/ಮಲ್ಲಿಕಾರ್ಜುನ ಗುಡಿ | – | – | – | ಇದೆ |
| 123 | ಜಮಖಂಡಿ | ಹಳಿಂಗಳಿ/ಹರಿಜನಕೇರಿ | – | – | – | ಇದೆ |
| 124 | ಜಮಖಂಡಿ | ಹಳಿಂಗಳಿ/ಪದ್ಮಾವತಿ ಅಂಕೇಂದ್ರ | – | – | – | ಇದೆ |
| 125 | ಜಮಖಂಡಿ | ಲೋಕಾಪೂರ ತೋಟ ಹಳಿಂಗಳಿ (ಜಮಖಂಡಿ ಗೊಲ್ಲರ ಕಾಲೋನಿ) | – | – | – | ಇದೆ |
| 126 | ಜಮಖಂಡಿ | ತಮದಡ್ಡಿ/ಸಿಮಿಲಕ್ಕವ್ವನ ಗುಡಿ | – | – | – | ಇದೆ |
| 127 | ಜಮಖಂಡಿ | ಗೂಳೆನ್ನವರ ತೋಟ / ಯರಗಟ್ಟಿ | – | – | – | ಇದೆ |
| 128 | ಜಮಖಂಡಿ | ಯರಗಟ್ಟಿ/ಮಠಪತಿ ತೋಟ | – | – | – | ಇದೆ |
| 129 | ಜಮಖಂಡಿ | ಹನಗಂಡಿ /ಸರದಾರ ಗುಡ್ಡ | – | – | – | ಇದೆ |
| 130 | ಜಮಖಂಡಿ | ಹನಗಂಡಿ/ನಾಯಕ ಓಣಿ | – | – | – | ಇದೆ |
| 131 | ಜಮಖಂಡಿ | ಯರಗಟ್ಟಿ/ಹರಿಜನಕೇರಿ | – | – | – | ಇದೆ |
| 132 | ಜಮಖಂಡಿ | ಯಲಲ್ಲಮ್ಮನ ಗುಡಿ / ತಮದಡ್ಡಿ | – | – | – | ಇದೆ |

| | | | | | | |
|---|---|---|---|---|---|---|
| 133 | ಜಮಖಂಡಿ | ಮಠದ ಏರಿಯಾ / ತಮದಡ್ಡಿ | – | – | – | ಇದೆ |
| 134 | ಜಮಖಂಡಿ | ಹರಿಜನಕೇರಿ/ ತಮದಡ್ಡಿ | – | – | – | ಇದೆ |
| 135 | ಜಮಖಂಡಿ | ಚಿಮ್ಮಡ/ಕನ್ನಡ ಶಾಲೆ ಹತ್ತಿರ | – | – | – | ಇದೆ |
| 136 | ಜಮಖಂಡಿ | ಚಿಮ್ಮಡ /ಹರಿಜನಕೇರಿ | – | – | – | ಇದೆ |
| 137 | ಜಮಖಂಡಿ | ಚಿಮ್ಮಡ/ಸಂಗಯ್ಯಪ್ಪನ ಗುಡಿ | – | – | – | ಇದೆ |
| 138 | ಜಮಖಂಡಿ | ಚಿಮ್ಮಡ/ಸಿಮಿಲಕ್ಕವ್ವನಗುಡಿ | – | – | – | ಇದೆ |
| 139 | ಜಮಖಂಡಿ | ಚಿಮ್ಮಡ/ಪಾಟೀಲ ತೋಟ | – | – | – | ಇದೆ |
| 140 | ಜಮಖಂಡಿ | ಚಿಮ್ಮಡ/ಜಾಂಗನೂರ ತೋಟ | – | – | – | ಇದೆ |
| 141 | ಜಮಖಂಡಿ | ಚಿಮ್ಮಡ/ಬೆಳಗಾಂವಕರ ತೋಟ | – | – | – | ಇದೆ |
| 142 | ಜಮಖಂಡಿ | ಚಿಮ್ಮಡ/ಜಾಲಿಕಟ್ಟಿ ತೋಟ | – | – | – | ಇದೆ |
| 143 | ಜಮಖಂಡಿ | ಚಿಮ್ಮಡ/ಜಗದಾಳ ತೋಟ | – | – | – | ಇದೆ |
| 144 | ಜಮಖಂಡಿ | ಚಿಮ್ಮಡ/ಜನತಾಪ್ಲಾಟ | – | – | – | ಇದೆ |
| 145 | ಜಮಖಂಡಿ | ಚಿಮ್ಮಡ/ಮುಗಳಖೋಡ ತೋಟ | – | – | – | ಇದೆ |
| 146 | ಜಮಖಂಡಿ | ಚಿಮ್ಮಡ/ಗುರವ ತೋಟ | – | – | – | ಇದೆ |
| 147 | ಜಮಖಂಡಿ | ಯಲ್ಲಮ್ಮನ ಗುಡಿ / ಚಿಮ್ಮಡ | – | – | – | ಇದೆ |
| 148 | ಜಮಖಂಡಿ | ಮಲ್ಲಿಕಾರ್ಜುನ ಗುಡಿ / ಚಿಮ್ಮಡ | – | – | – | ಇದೆ |
| 149 | ಜಮಖಂಡಿ | ಚಿಮ್ಮಡ /ಕವಟೆ ತೋಟ | – | – | – | ಇದೆ |
| 150 | ಜಮಖಂಡಿ | ಚಿಮ್ಮಡ / ಮಹಾಲಿಂಗೇಶ್ವರ ತೋಟ' | – | – | – | ಇದೆ |
| 151 | ಜಮಖಂಡಿ | ಆಸಂಗಿ/ಹನುಮಾನ ಗುಡಿ | – | – | – | ಇದೆ |
| 152 | ಜಮಖಂಡಿ | ಆಸಂಗಿ/ಜ್ಯೋತಿಬಾ ಗುಡಿ | – | – | – | ಇದೆ |
| 153 | ಜಮಖಂಡಿ | ಆಸಂಗಿ/ಹೊಸ ಪ್ಲಾಟ | – | – | – | ಇದೆ |
| 154 | ಜಮಖಂಡಿ | ಆಸಂಗಿ/ವೇಣುಗೋಪಾಲಗುಡಿ | – | – | – | ಇದೆ |
| 155 | ಜಮಖಂಡಿ | ಆಸಂಗಿ/ಗುಡ್ಡದ ಏರಿಯಾ–1 | – | – | – | ಇದೆ |

| | | | | | | |
|---|---|---|---|---|---|---|
| 156 | ಜಮಖಂಡಿ | ಆಸಂಗಿ /ಗುಡ್ಡದ ಏರಿಯಾ-2 | - | - | - | ಇದೆ |
| 157 | ಜಮಖಂಡಿ | ಆಸಂಗಿ/ಹರಿಜನಕೇರಿ | - | - | - | ಇದೆ |
| 158 | ಜಮಖಂಡಿ | ಆಸಂಗಿ/ತೇಲಿ ತೋಟ | - | - | - | ಇದೆ |
| 159 | ಜಮಖಂಡಿ | ಆಸಂಗಿ/ದೂಪದಾಳ ತೋಟ | - | - | - | ಇದೆ |
| 160 | ಜಮಖಂಡಿ | ಮದನಮಟ್ಟಿ/ಚಿಕ್ಕೂಡ ಏರಿಯಾ | - | - | - | ಇದೆ |
| 161 | ಜಮಖಂಡಿ | ಮದನಮಟ್ಟಿ/ಹಳಿಂಗಳಿ ರೋಡ | - | - | - | ಇದೆ |
| 162 | ಜಮಖಂಡಿ | ಯಲ್ಲಟ್ಟಿ ಓನಿ / ಅಸ್ಕಿ | - | - | - | ಇದೆ |
| 163 | ಜಮಖಂಡಿ | ಲಕ್ಕವ್ವನಗುಡಿ / ಅಸ್ಕಿ | - | - | - | ಇದೆ |
| 164 | ಜಮಖಂಡಿ | ನಾವಲಗಿ/ಮುಧೋಳ ರಸ್ತೆ | - | - | - | ಇದೆ |
| 165 | ಜಮಖಂಡಿ | ನಾವಲಗಿ/ಹರಿಜನಕೇರಿ | - | - | - | ಇದೆ |
| 166 | ಜಮಖಂಡಿ | ನಾವಲಗಿ/ಬಿರಡಿ ತೋಟ | - | - | - | ಇದೆ |
| 167 | ಜಮಖಂಡಿ | ನಾವಲಗಿ/ಶಾಲೆ ಹತ್ತಿರ | - | - | - | ಇದೆ |
| 168 | ಜಮಖಂಡಿ | ನಾವಲಗಿ/ಹೊಸಪ್ಲಾಟ | - | - | - | ಇದೆ |
| 169 | ಜಮಖಂಡಿ | ನಾವಲಗಿ/ಪಂಚಾಯತಿ ಹತ್ತಿರ | - | - | - | ಇದೆ |
| 170 | ಜಮಖಂಡಿ | ನಾವಲಗಿ/ಶಿರೋಳ ತೋಟ | - | - | - | ಇದೆ |
| 171 | ಜಮಖಂಡಿ | ನಾವಲಗಿ/ಬೆಳಗಲಿ ತೋಟ | - | - | - | ಇದೆ |
| 172 | ಜಮಖಂಡಿ | ನಾವಲಗಿ/ಪಟ್ಟಣಶೆಟ್ಟಿತೋಟ | - | - | - | ಇದೆ |
| 173 | ಜಮಖಂಡಿ | ಬಂಡಿಗಣಿ/ವಿಠ್ಠಲ ಮಂದಿರ | - | - | - | ಇದೆ |
| 174 | ಜಮಖಂಡಿ | ಹರಿಜನಕೇರಿ/ಬಂಡಿಗಣಿ | - | - | - | ಇದೆ |
| 175 | ಜಮಖಂಡಿ | ಬಂಡಿಗಣಿ/ಶಾಲೆಹತ್ತಿರ | - | - | - | ಇದೆ |
| 176 | ಜಮಖಂಡಿ | ಜಗದಾಳ/ಹರಿಜನಕೇರಿ | - | - | - | ಇದೆ |
| 177 | ಜಮಖಂಡಿ | ಜಗದಾಳ/ಕಾಡಸಿದ್ದೇಶ್ವರಗುಡಿ | - | - | - | ಇದೆ |
| 178 | ಜಮಖಂಡಿ | ಜಗದಾಳ/ಜನತಾಪ್ಲಾಟ | - | - | - | ಇದೆ |

| | | | | | | |
|---|---|---|---|---|---|---|
| 179 | ಜಮಖಂಡಿ | ಜಗದಾಳ/ಕಚ್ಚುತೋಟ | – | – | – | ಇದೆ |
| 180 | ಜಮಖಂಡಿ | ಜಗದಾಳ/ಕಾನಟ್ಟಿ | – | – | – | ಇದೆ |
| 181 | ಜಮಖಂಡಿ | ಯಲ್ಲಟ್ಟಿ/ಪಂಚಾಯತಿ ಹತ್ತಿರ | – | – | – | ಇದೆ |
| 182 | ಜಮಖಂಡಿ | ಯಲ್ಲಟ್ಟಿ/ಹರಿಜನಕೇರಿ | – | – | – | ಇದೆ |
| 183 | ಜಮಖಂಡಿ | ಯಲ್ಲಟ್ಟಿ/ಸೀಮಿಲಕ್ಕವ್ವನ ಗುಡಿ | – | – | – | ಇದೆ |
| 184 | ಜಮಖಂಡಿ | ಯಲ್ಲಟ್ಟಿ/ಪರಾಳ ಮಡ್ಡಿ | – | – | – | ಇದೆ |
| 185 | ಜಮಖಂಡಿ | ಸೀಮಿ ಲಕ್ಕವ್ವನ ಗುಡಿ / ಜಗದಾಳ | – | – | – | ಇದೆ |
| 186 | ಜಮಖಂಡಿ | ಆಶ್ರಯ ಪ್ಲಾಟ / ಜಗದಾಳ | – | – | – | ಇದೆ |
| 187 | ಜಮಖಂಡಿ | ಜಡೇಶ್ವರ ಗುಡಿ / ಜಗದಾಳ | – | – | – | ಇದೆ |
| 188 | ಜಮಖಂಡಿ | ಕಾಡಸಿದ್ದೇಶ್ವರ ದೇವಸ್ಥಾನ | – | – | – | ಇದೆ |
| 189 | ಜಮಖಂಡಿ | ಹರಿಜನಕೇರಿ | – | – | – | ಇದೆ |
| 190 | ಜಮಖಂಡಿ | ಬನಶಂಕರಿದೇವಿ | – | – | – | ಇದೆ |
| 191 | ಜಮಖಂಡಿ | ಲೆಂಗ್ರೆ ಗಲ್ಲಿ | – | – | – | ಇದೆ |
| 192 | ಜಮಖಂಡಿ | ಯಲ್ಲಮ್ಮನ ಗುಡಿ | – | – | – | ಇದೆ |
| 193 | ಜಮಖಂಡಿ | ದಾಸಾರ ಏರಿಯಾ | – | – | – | ಇದೆ |
| 194 | ಜಮಖಂಡಿ | ಬಸವ ನಗರ | – | – | – | ಇದೆ |
| 195 | ಜಮಖಂಡಿ | ಚಾವಡಿ ಗಲ್ಲಿ | – | – | – | ಇದೆ |
| 196 | ಜಮಖಂಡಿ | ವಿದ್ಯಾನಗರ ಲಕ್ಷ್ಮೀ ಗುಡಿ | – | – | – | ಇದೆ |
| 197 | ಜಮಖಂಡಿ | ಲಕ್ಷ್ಮೀಗುಡಿ ಸಮಾಜ ಮಂದಿರ | – | – | – | ಇದೆ |
| 198 | ಜಮಖಂಡಿ | ಹನುಮಾನ ಗುಡಿ | – | – | – | ಇದೆ |
| 199 | ಜಮಖಂಡಿ | ಕಟಗಿ ಗಲ್ಲಿ | – | – | – | ಇದೆ |
| 200 | ಜಮಖಂಡಿ | ಬ್ರಹ್ಮಾನಂದ ನಗರ | – | – | – | ಇದೆ |
| 201 | ಜಮಖಂಡಿ | ಇದ್ಗಾ ಗಲ್ಲಿ | – | – | – | ಇದೆ |

| | | | | | | |
|---|---|---|---|---|---|---|
| 202 | ಜಮಖಂಡಿ | ರಾಮಲಿಂಗ ಗುಡಿ | - | - | - | ಇದೆ |
| 203 | ಜಮಖಂಡಿ | ಪಗ್ಗಮಲ್ಲಯ್ಯನ ಗುಡಿ | - | - | - | ಇದೆ |
| 204 | ಜಮಖಂಡಿ | ಬಜಂತ್ರಿ ಗಲ್ಲಿ | - | - | - | ಇದೆ |
| 205 | ಜಮಖಂಡಿ | ವಿಠೋಬಾ ಮಂದಿರ | - | - | - | ಇದೆ |
| 206 | ಜಮಖಂಡಿ | ತುಗಲಿ ಲಕ್ಕವ್ವನ ಗುಡಿ | - | - | - | ಇದೆ |
| 207 | ಜಮಖಂಡಿ | ವಿದ್ಯಾನಗರ ಬಜಂತ್ರಿ ಏರಿಯಾ | - | - | - | ಇದೆ |
| 208 | ಜಮಖಂಡಿ | ಮೇಲಿನ ಹರಿಜನಕೇರಿ | - | - | - | ಇದೆ |
| 209 | ಜಮಖಂಡಿ | ಕಟಗಿ ಬಸವಣ್ಣ ದೇವಸ್ಥಾನ | - | - | - | ಇದೆ |
| 210 | ಜಮಖಂಡಿ | ಹೂಗಾರ ತೋಟ | - | - | - | ಇದೆ |
| 211 | ಜಮಖಂಡಿ | ಪ್ರಭುದೇವರ ಗುಡಿ | - | - | - | ಇದೆ |
| 212 | ಜಮಖಂಡಿ | ಕಲೂತಿ ನಗರ ತೇರದಾಳ | - | - | - | ಇದೆ |
| 213 | ಜಮಖಂಡಿ | ಗೋಲಬಾವಿ ರೋಡ ತೇರದಾಳ | - | - | - | ಇದೆ |
| 214 | ಜಮಖಂಡಿ | ಪೆಂಡಾರಿ ತೋಟ | - | - | - | ಇದೆ |
| 215 | ಜಮಖಂಡಿ | ಲಮಾಣಿ ತಾಂಡಾ | - | - | - | ಇದೆ |
| 216 | ಜಮಖಂಡಿ | ಬಜಂತ್ರಿ ಗಲ್ಲಿ | - | - | - | ಇದೆ |
| 217 | ಜಮಖಂಡಿ | ತಳವಾರ ಗಲ್ಲಿ | - | - | - | ಇದೆ |
| 218 | ಜಮಖಂಡಿ | ಬಸವ ನಗರ | - | - | - | ಇದೆ |
| 219 | ಜಮಖಂಡಿ | ಕಲ್ಲಟ್ಟಿ ಗಲ್ಲಿ | - | - | - | ಇದೆ |
| 220 | ಜಮಖಂಡಿ | ದೇವರಾಜ ನಗರ ಹಾಸ್ಟೇಲ ಹಿಂದೆ | - | - | - | ಇದೆ |
| 221 | ಜಮಖಂಡಿ | ದಾಸರ ಮಡ್ಡಿ | - | - | - | ಇದೆ |
| 222 | ಜಮಖಂಡಿ | ಹಳಪೇಠ ಗಲ್ಲಿ | - | - | - | ಇದೆ |
| 223 | ಜಮಖಂಡಿ | ಕಿಲ್ಲಾಬಾಗ | - | - | - | ಇದೆ |
| 224 | ಜಮಖಂಡಿ | ಹರಿಜನಕೇರಿ | - | - | - | ಇದೆ |

| | | | | | | |
|---|---|---|---|---|---|---|
| 225 | ಜಮಖಂಡಿ | ಸಮಗಾರ ಓಣಿ | – | – | – | ಇದೆ |
| 226 | ಜಮಖಂಡಿ | ಮಾರ್ಕೇಟ ಗಲ್ಲಿ | – | – | – | ಇದೆ |
| 227 | ಜಮಖಂಡಿ | ಡಚ್ ಕಾಲನಿ | – | – | – | ಇದೆ |
| 228 | ಜಮಖಂಡಿ | ವಿಠ್ಠಲ ಮಂದಿರ | – | – | – | ಇದೆ |
| 229 | ಜಮಖಂಡಿ | ಮಾಂಗ ಗಲ್ಲಿ | – | – | – | ಇದೆ |
| 230 | ಜಮಖಂಡಿ | ಪಿ.ಎಚ್.ಸಿ ಹತ್ತಿರ | – | – | – | ಇದೆ |
| 231 | ಜಮಖಂಡಿ | ದೇಸಾಯಿ ಕೇರಿ | – | – | – | ಇದೆ |
| 232 | ಜಮಖಂಡಿ | ವೈಯಾನ ಮಡ್ಡಿ | – | – | – | ಇದೆ |
| 233 | ಜಮಖಂಡಿ | ಸವದಿ ನಗರ | – | – | – | ಇದೆ |
| 234 | ಜಮಖಂಡಿ | ಬಸವನ ಗುಡಿ | – | – | – | ಇದೆ |
| 235 | ಜಮಖಂಡಿ | ಕುಡಚಿ ನಾಕಾ | – | – | – | ಇದೆ |
| 236 | ಜಮಖಂಡಿ | ಮುಕುಂದ ತೋಟ | – | – | – | ಇದೆ |
| 237 | ಜಮಖಂಡಿ | ಹೀರೆ ಹಳ್ಳ | – | – | – | ಇದೆ |
| 238 | ಜಮಖಂಡಿ | ಶಿವಾನಂದ ಮಠ | – | – | – | ಇದೆ |
| 239 | ಜಮಖಂಡಿ | ಸಮುದಾಯ ಭವನ | – | – | – | ಇದೆ |
| 240 | ಜಮಖಂಡಿ | ಹಾಸ್ಟೇಲ ಹಿಂದೆ | – | – | – | ಇದೆ |
| 241 | ಜಮಖಂಡಿ | ಬನಹಟ್ಟಿ/ ನಾಮದೇವ ಗಲ್ಲಿ | – | – | – | ಇದೆ |
| 242 | ಜಮಖಂಡಿ | ಬನಹಟ್ಟಿ/ಮಟ್ಟಿಕಲ್ಲಿ | – | – | – | ಇದೆ |
| 243 | ಜಮಖಂಡಿ | ಬನಹಟ್ಟಿ/ಮೋಪಗಾರ ಏರಿಯಾ | – | – | – | ಇದೆ |
| 244 | ಜಮಖಂಡಿ | ಬನಹಟ್ಟಿ/ತಾಂಬೋಳ್ಳಿ ಗಲ್ಲಿ | – | – | – | ಇದೆ |
| 245 | ಜಮಖಂಡಿ | ಬನಹಟ್ಟಿ/ಶಂಕಲಿಂಗ ದೇವಸ್ತಾನ | – | – | – | ಇದೆ |
| 246 | ಜಮಖಂಡಿ | ಬನಹಟ್ಟಿ/ಬೀಳಗಿ ಗಲ್ಲಿ | – | – | – | ಇದೆ |
| 247 | ಜಮಖಂಡಿ | ಬನಹಟ್ಟಿ/ನೀಲಗಾರ ಓಣಿ | – | – | – | ಇದೆ |

| | | | | | | |
|---|---|---|---|---|---|---|
| 248 | ಜಮಖಂಡಿ | ಬನಹಟ್ಟಿ/ಮಾಳಿಂಗಾರಾಯ ದೇವಸ್ಥಾನ | – | – | – | ಇದೆ |
| 249 | ಜಮಖಂಡಿ | ಬನಹಟ್ಟಿ/ಈಶ್ವರಲಿಂಗ ಮೈದಾನ | – | – | – | ಇದೆ |
| 250 | ಜಮಖಂಡಿ | ಬನಹಟ್ಟಿ/ಪೆಂಡಾರಿ ಗಲ್ಲಿ-1 | – | – | – | ಇದೆ |
| 251 | ಜಮಖಂಡಿ | ಬನಹಟ್ಟಿ/ಪೆಂಡಾರಿ ಗಲ್ಲಿ-2 | – | – | – | ಇದೆ |
| 252 | ಜಮಖಂಡಿ | ಬನಹಟ್ಟಿ/ವಡ್ಡರ ಗಲ್ಲಿ | – | – | – | ಇದೆ |
| 253 | ಜಮಖಂಡಿ | ಬನಹಟ್ಟಿ/ತಟಗಾರ ಗಲ್ಲಿ | – | – | – | ಇದೆ |
| 254 | ಜಮಖಂಡಿ | ಬನಹಟ್ಟಿ/ದತ್ತಾತ್ರೇಯ ಗುಡಿ ಹತ್ತಿರ | – | – | – | ಇದೆ |
| 255 | ಜಮಖಂಡಿ | ಬನಹಟ್ಟಿ/ಬನಶಂಕರಿ ದೇವಸ್ಥಾನ | – | – | – | ಇದೆ |
| 256 | ಜಮಖಂಡಿ | ಬನಹಟ್ಟಿ/ಸದಾಶಿವ ನಗರ | – | – | – | ಇದೆ |
| 257 | ಜಮಖಂಡಿ | ಬನಹಟ್ಟಿ/ನೀರಿಬ ಟಾಕಿ | – | – | – | ಇದೆ |
| 258 | ಜಮಖಂಡಿ | ಬನಹಟ್ಟಿ/ದಾನಮ್ಮ ದೇವಸ್ಥಾನ | – | – | – | ಇದೆ |
| 259 | ಜಮಖಂಡಿ | ಬನಹಟ್ಟಿ/ದೇವರ ದಾಸಿಮಯ್ಯಾ ಕಾಲನಿ | – | – | – | ಇದೆ |
| 260 | ಜಮಖಂಡಿ | ಬನಹಟ್ಟಿ/ಗುಂಡಯ್ಯಪ್ಪನ ಮಠ | – | – | – | ಇದೆ |
| 261 | ಜಮಖಂಡಿ | ಬನಹಟ್ಟಿ/ಕುರುಬರ ಗಲ್ಲಿ | – | – | – | ಇದೆ |
| 262 | ಜಮಖಂಡಿ | ಬನಹಟ್ಟಿ/ಕೆ.ಎಚ್.ಡಿ.ಸಿ ಕಾಲನಿ-1 | – | – | – | ಇದೆ |
| 263 | ಜಮಖಂಡಿ | ಬನಹಟ್ಟಿ/ಕೆ.ಎಚ್.ಡಿ.ಸಿ ಕಾಲನಿ-2 | – | – | – | ಇದೆ |
| 264 | ಜಮಖಂಡಿ | ಬನಹಟ್ಟಿ/ಬಸವ ನಗರ | – | – | – | ಇದೆ |
| 265 | ಜಮಖಂಡಿ | ಬನಹಟ್ಟಿ/ಮುಮುಕ್ಷ ಮಠ | – | – | – | ಇದೆ |
| 266 | ಜಮಖಂಡಿ | ಬನಹಟ್ಟಿ/ಹರಿಜನಕೇರಿ | – | – | – | ಇದೆ |
| 267 | ಜಮಖಂಡಿ | ಬನಹಟ್ಟಿ/ಗಣಪತಿ ಗುಡಿ | – | – | – | ಇದೆ |
| 268 | ಜಮಖಂಡಿ | ಬನಹಟ್ಟಿ/ಶಂಕ್ರಮ್ಮನ ದೇವಸ್ತಾನ | – | – | – | ಇದೆ |
| 269 | ಜಮಖಂಡಿ | ಬನಹಟ್ಟಿ/ಯಮನೂರಪ್ಪನ ದರ್ಗಾ | – | – | – | ಇದೆ |
| 270 | ಜಮಖಂಡಿ | ಬನಹಟ್ಟಿ/ಮುಲ್ಲಾಓಣಿ | – | – | – | ಇದೆ |

| | | | | | | |
|---|---|---|---|---|---|---|
| 271 | ಜಮಖಂಡಿ | ಬನಹಟ್ಟಿ/ಗೋಲಲ್ಲರ ಗಲ್ಲಿ | – | – | – | ಇದೆ |
| 272 | ಜಮಖಂಡಿ | ಬನಹಟ್ಟಿ/ಲಕ್ಷ್ಮೀ ನಗರ | – | – | – | ಇದೆ |
| 273 | ಜಮಖಂಡಿ | ಬನಹಟ್ಟಿ/ಲಮಾಣಿ ತಾಂಡಾ | – | – | – | ಇದೆ |
| 274 | ಜಮಖಂಡಿ | ಬನಹಟ್ಟಿ/ತೋಟದ ಏರಿಯಾ | – | – | – | ಇದೆ |
| 275 | ಜಮಖಂಡಿ | ಬನಹಟ್ಟಿ/ಜಿಡ್ಡಿಮನಿ ತೋಟ | – | – | – | ಇದೆ |
| 276 | ಜಮಖಂಡಿ | ಬನಹಟ್ಟಿ/ಆಝಾದ ಗಲ್ಲಿ | – | – | – | ಇದೆ |
| 277 | ಜಮಖಂಡಿ | ರಾಂಪೂರ/ಸ್ವಾಮೀ ಗುಡ್ಡದ ಏರಿಯಾ | – | – | – | ಇದೆ |
| 278 | ಜಮಖಂಡಿ | ರಾಂಪೂರ/ಫಾರೆಸ್ಟ ಏರಿಯಾ | – | – | – | ಇದೆ |
| 279 | ಜಮಖಂಡಿ | ರಾಂಪೂರ/ಮಲ್ಲಿಕಾರ್ಜುನ ಗಲ್ಲಿ | – | – | – | ಇದೆ |
| 280 | ಜಮಖಂಡಿ | ರಾಂಪೂರ/ವಡ್ಡರ ಗಲ್ಲಿ | – | – | – | ಇದೆ |
| 281 | ಜಮಖಂಡಿ | ರಾಂಪೂರ/ವಿವೇಕಾನಂದ ಗಲ್ಲಿ | – | – | – | ಇದೆ |
| 282 | ಜಮಖಂಡಿ | ರಾಂಪೂರ/ಕಲಾಲ ಓಣಿ | – | – | – | ಇದೆ |
| 283 | ಜಮಖಂಡಿ | ರಾಂಪೂರ/ಅಂಬಾಭವಾನಿ ಗುಡಿ | – | – | – | ಇದೆ |
| 284 | ಜಮಖಂಡಿ | ರಾಂಪೂರ/ರಾಮಪೂರ ಅರಣ್ಯ ಏರಿಯಾ | – | – | – | ಇದೆ |
| 285 | ಜಮಖಂಡಿ | ರಾಂಪೂರ/ಮುಲ್ಲಾಓಣಿ | – | – | – | ಇದೆ |
| 286 | ಜಮಖಂಡಿ | ಹೊಸೂರ/ಹರಿಜನಕೇರಿ | – | – | – | ಇದೆ |
| 287 | ಜಮಖಂಡಿ | ಹೊಸೂರ/ನೀಲಕಂಠೇಶ್ವರ ಮಠ | – | – | – | ಇದೆ |
| 288 | ಜಮಖಂಡಿ | ಹೊಸೂರ/ವಗ್ಗ್‌ಮಲ್ಲಯ್ಯನ ಗುಡಿ | – | – | – | ಇದೆ |
| 289 | ಜಮಖಂಡಿ | ಹೊಸೂರ/ಶಾಂತಿ ನಗರ | – | – | – | ಇದೆ |
| 290 | ಜಮಖಂಡಿ | ಹೊಸೂರ/ದರ್ಗಾ ಓಣಿ | – | – | – | ಇದೆ |
| 291 | ಜಮಖಂಡಿ | ಹೋಸುರ' ಸಾಲಿಮನಿ ತೋಟ | – | – | – | ಇದೆ |
| 292 | ಜಮಖಂಡಿ | ಹೋಸುರ ವಡ್ಡರ ಮೆಟ್ಟ | – | – | – | ಇದೆ |
| 293 | ಜಮಖಂಡಿ | ಮದುರಖಂಡಿ/ಶಾಲಾ ಆವರಣ | – | – | – | ಇದೆ |

| | | | | | | |
|---|---|---|---|---|---|---|
| 294 | ಜಮಖಂಡಿ | ಮದುರಖಂಡಿ/ಹರಿಜನಕೇರಿ | – | – | – | ಇದೆ |
| 295 | ಜಮಖಂಡಿ | ಮಧುರಖಂಡಿ/ಈಶ್ವರಲಿಂಗ ಗುಡಿ | – | – | – | ಇದೆ |
| 296 | ಜಮಖಂಡಿ | ಮಧುರಖಂಡಿ/ಸಿದ್ದಲಿಂಗೇಶ್ವರ ಗುಡಿ | – | – | – | ಇದೆ |
| 297 | ಜಮಖಂಡಿ | ಮಧುರಖಂಡಿ/ಸಿದ್ದರಡ್ಡಿ ತೋಟ | – | – | – | ಇದೆ |
| 298 | ಜಮಖಂಡಿ | ಮಧುರಖಂಡಿ/ಹುಲಿಕೋಡಿ | – | – | – | ಇದೆ |
| 299 | ಜಮಖಂಡಿ | ಮಧುರಖಂಡಿ/ಪರಪ್ಪನ್ನವರ ತೋಟ | – | – | – | ಇದೆ |
| 300 | ಜಮಖಂಡಿ | ಕಲಹಳ್ಳಿ/ಜನತಾ ಪ್ಲಾಟ | – | – | – | ಇದೆ |
| 301 | ಜಮಖಂಡಿ | ಕಲಹಳ್ಳಿ/ಹರಿಜನಕೇರಿ | – | – | – | ಇದೆ |
| 302 | ಜಮಖಂಡಿ | ಕಲ್ಲಹಳ್ಳಿ /ಸತ್ಯಕಾಮ ತೋಟ | – | – | – | ಇದೆ |
| 303 | ಜಮಖಂಡಿ | ಮದುರಖಂಡಿ /ಶಾಲಾ ಆವರಣ | – | – | – | ಇದೆ |
| 304 | ಜಮಖಂಡಿ | ಕಲಹಳ್ಳಿ/ಪಂಚಾಯತಿ ಹತ್ತಿರ | – | – | – | ಇದೆ |
| 305 | ಜಮಖಂಡಿ | ಕಲ್ಲಹಳ್ಳಿ ಶಿರೋಳ ರೋಡ | – | – | – | ಇದೆ |

# ಕರ್ನಾಟಕ ಸರ್ಕಾರ

ಸಂ:ಮಮಇ 56 ವಿಶಿಕ್ಷ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 11 .03.2020

148
9/5
11/3/20

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸಚಿವಾಲಯ,
ವಿಧಾನಸೌಧ,
ಬೆಂಗಳೂರು

ಮಾನ್ಯರೆ,

**ವಿಷಯ:** ಶ್ರೀ/~~ಶ್ರೀಮತಿ~~. ---ಸಿದ್ದು ಸವದಿ--------------- ಮಾನ್ಯ ವಿಧಾನ ಸಭಾ /~~ವಿಧಾನ ಪರಿಷತ್~~ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ:--1143--ಕ್ಕೆ ಉತ್ತರಿಸುವ ಕುರಿತು

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ/~~ಶ್ರೀಮತಿ~~. ---ಸಿದ್ದು ಸವದಿ---------- ಮಾನ್ಯ ವಿಧಾನ ಸಭಾ /~~ವಿಧಾನ ಪರಿಷತ್~~ ಸದಸ್ಯರು ಇವರು ಮಂಡಿಸಿರುವ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ:--1143--ಕ್ಕೆ ಉತ್ತರವನ್ನು ---100---ಪ್ರತಿಗಳಲ್ಲಿ ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

G. H. Sarojamma
(ಜಿ ಹೆಚ್ ಸರೋಜಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ.

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1143
ಸದಸ್ಯರ ಹೆಸರು : ಶ್ರೀ. ಸಿದ್ದು ಸವದಿ (ತೇರದಾಳ)
ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು
ಉತ್ತರಿಸಬೇಕಾದ ದಿನಾಂಕ : 11-03-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಅಂಗನವಾಡಿ ಕಾರ್ಯಕರ್ತೆಯರಿಗೆ ಇರುವ ಸಂಭಾವನೆ ಎಷ್ಟು; ಅವರಿಗೆ ಇರುವ ಸೌಲಭ್ಯಗಳಾವುವು; (ಸಂಪೂರ್ಣ ಮಾಹಿತಿ ಒದಗಿಸುವುದು) | ಪ್ರಸ್ತುತ ಅಂಗನವಾಡಿ ಕಾರ್ಯಕರ್ತೆಯರಿಗೆ ಮಾಸಿಕ ರೂ.10000/- ಗೌರವಧನವನ್ನು ಪಾವತಿಸಲಾಗುತ್ತಿದೆ.<br><br>ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ ದೊರೆಯುವ ಸೌಲಭ್ಯಗಳ ವಿವರವನ್ನು ಅನುಬಂಧ-1 ರಲ್ಲಿ ಲಗತ್ತಿಸಲಾಗಿದೆ. |
| ಆ. | ವರ್ಕರ್ ಮತ್ತು ಹೆಲ್ಪರ್‌ಗಳ ಆಯ್ಕೆ ಮಾಡಿಕೊಳ್ಳುವ ಮಾನದಂಡಗಳಾವುವು; (ಗ್ರಾಮ ಮತ್ತು ಪಟ್ಟಣಗಳಲ್ಲಿರುವ ಮಾಹಿತಿ ಒದಗಿಸುವುದು) | ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರನ್ನು ಆಯ್ಕೆ ಮಾಡಲು ಇರುವ ಮಾರ್ಗಸೂಚಿಯನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |
| ಇ. | ಮೇಲ್ವಿಚಾರಕಿಯರ ಅಂಗನವಾಡಿ ಕಾರ್ಯಕರ್ತೆಯರ ಹಾಗೂ ಸಹಾಯಕರುಗಳಿಗೆ ಎಷ್ಟು ತಿಂಗಳಿಂದ ಸಂಬಳ ನೀಡಿರುವುದಿಲ್ಲ; ನೀಡದಿರಲು ಕಾರಣಗಳೇನು? | ಬಹುತೇಕ ಮೇಲ್ವಿಚಾರಕರು, ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರಿಗೆ ಸರಾಸರಿಯಾಗಿ ನವೆಂಬರ್-2019 ನೇ ಮಾಹೆಯವರೆಗೂ ವೇತನ/ಗೌರವಧನ ಪಾವತಿಸಲಾಗಿರುತ್ತದೆ. ಉಳಿದಂತೆ ಬಾಕಿ ಮಾಹೆಯವರೆಗೂ ವೇತನ ಮತ್ತು ಗೌರವಧನ ಪಾವತಿಸಲು ಹೆಚ್ಚುವರಿ ಅನುದಾನ ಬಿಡುಗಡೆಯಾಗಿದ್ದು ಸದರಿ ಅನುದಾನವನ್ನು ತಾಲ್ಲೂಕು ಪಂಚಾಯಿತಿಗಳಿಗೆ ಅನುಮೋದನೆ ಮಾಡುವ ಹಂತದಲ್ಲಿ ಎನ್.ಎಂ.ಸಿ.ಯಲ್ಲಿ ಉಂಟಾದ ತಾಂತ್ರಿಕ ತೊಂದರೆಯಿಂದಾಗಿ ವಿಳಂಬವಾಗಿದ್ದು, ಪ್ರಸ್ತುತ ಎನ್.ಎಂ.ಸಿ.ಯಲ್ಲಿ ತಾಂತ್ರಿಕ ತೊಂದರೆ ಸರಿಪಡಿಸಿದ್ದು, ವೇತನ ಪಾವತಿಸಲು ಕ್ರಮವಹಿಸಲಾಗುತ್ತಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 56 ಐಸಿಡಿ 2020

ವಿಧಾನ ಸಭಾ ಸದಸ್ಯರಾದ ಶ್ರೀ. ಸಿದ್ದು ಸವದಿ (ತೇರದಾಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1143ಕ್ಕೆ ಅನುಬಂಧ-1

## ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರದಿಂದ ದೊರೆಯುವ ಸೌಲಭ್ಯಗಳು

**ಕೇಂದ್ರ ಸರ್ಕಾರದಿಂದ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ ನೀಡಲಾಗುತ್ತಿರುವ ಸೌಲಭ್ಯಗಳು:**

**ಗೌರವಧನ:**

ಹಾಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಯಕರ್ತೆಯರಿಗೆ ರೂ.4500/-, ಸಹಾಯಕಿಯರಿಗೆ ರೂ.2500/- ಹಾಗೂ ಮಿನಿ ಅಂಗನವಾಡಿ ಕಾರ್ಯಕರ್ತೆಯರಿಗೆ ರೂ.3500/- ಗೌರವಧನ ನೀಡುತ್ತಿದ್ದು, ಇದರಲ್ಲಿ 40% ಮೊತ್ತವನ್ನು ರಾಜ್ಯ ಸರ್ಕಾರದಿಂದ ಭರಿಸಲಾಗುತ್ತಿದೆ.

**ಸಮವಸ್ತ್ರ:**

ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ, ಕೇಂದ್ರ ಸರ್ಕಾರದ ವತಿಯಿಂದ ಒಂದು ಸಮವಸ್ತ್ರಕ್ಕೆ ರೂ.400/- ರಂತೆ ವಾರ್ಷಿಕ 2 ಸಮವಸ್ತ್ರಗಳನ್ನು ನೀಡಲಾಗುತ್ತಿದೆ.

**ರಜೆ:**

6 ತಿಂಗಳ ಗೌರವಧನ ಸಹಿತ ಹೆರಿಗೆ ರಜೆ ನೀಡಲಾಗುತ್ತಿದೆ ಹಾಗೂ ವಾರ್ಷಿಕ 20 ದಿನಗಳ ಸಾಂದರ್ಭಿಕ ರಜೆ ನೀಡುತ್ತಿದ್ದು, ಅನಾರೋಗ್ಯದ ಸಂದರ್ಭದಲ್ಲಿ 10 ದಿನಗಳ ರಜೆಯನ್ನು ಒಟ್ಟಿಗೆ ಉಪಯೋಗಿಸಬಹುದಾಗಿರುತ್ತದೆ

**ಜನಶ್ರೀ ಭೀಮಾ ಯೊಜನೆ:**

ಭಾರತ ಸರ್ಕಾರ ಮತ್ತು ಭಾರತೀಯ ಜೀವ ವಿಮಾ ನಿಗಮದ ಸಹಯೋಗದೊಂದಿಗೆ ಅಂಗನವಾಡಿ ಕಾರ್ಯಕರ್ತೆಯರು / ಸಹಾಯಕಿಯರಿಗೆ ಜನಶ್ರೀ ಬಿಮಾ ಯೋಜನೆಯನ್ನು ಜಾರಿಗೊಳಿಸಲಾದ್ದು, ಈ ಯೋಜನೆಯಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರು ಸ್ವ-ಇಚ್ಚೆಯಿಂದ ಸದಸ್ಯರಾಗುತ್ತಾರೆ.

ಈ ಯೋಜನೆಯಡಿ ಪ್ರತಿ ಫಲಾನುಭವಿಯ ವಾರ್ಷಿಕ ವಿಮಾ ವಂತಿಗೆ ರೂ.280 ಆಗಿದ್ದು, ಇದರಲ್ಲಿ ರೂ. 100/-ನ್ನು ಭಾರತ ಸರ್ಕಾರ ,ರೂ.100/-ನ್ನು ಭಾರತೀಯ ಜೀವ ವಿಮಾ ನಿಗಮದ ಸಾಮಾಜಿಕ ಭದ್ರತಾ ನಿಧಿಯಿಂದ ಮತ್ತು ರೂ.80/-ನ್ನು ಸಂಬಂಧ ಪಟ್ಟ ಕಾರ್ಯಕರ್ತೆ/ ಸಹಾಯಕಿಯರು ಭರಿಸಬೇಕಾಗಿರುತ್ತದೆ. ಇದರಲ್ಲಿ ರಾಜ್ಯ ಸರ್ಕಾರದ ವಂತಿಗೆ ಇರುವುದಿಲ್ಲ.

ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರು ಕಟ್ಟಬೇಕಾಗಿದ್ದ ವಂತಿಗೆ ರೂ.80/-ನ್ನು ಕೇಂದ್ರ ಸರ್ಕಾರವು ಮನ್ನಾ ಮಾಡಿದ್ದು, ಈ ಯೋಜನೆಯಲ್ಲಿ, ಸದಸ್ಯರಾದ ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರು

ಅ) ಸ್ವಾಭಾವಿಕ ಮರಣವಾದಲ್ಲಿ - ರೂ.30,000/-,

ಆ)ಅಪಘಾತದಿಂದ ಮರಣ/ಶಾಶ್ವತ ಅಂಗ ವೈಕಲ್ಯತೆ ಸಂಭವಿಸಿದಲ್ಲಿ - ರೂ.75,000/-

ಇ)ಅಂಶಿಕವಾಗಿ ಶಾಶ್ವತ ಅಂಗ ವೈಕಲ್ಯತೆ ಉಂಟಾದಲ್ಲಿ - ರೂ.37,500/-

ಪರಿಹಾರ ನೀಡಲಾಗುತ್ತದೆ.

ಸದಸ್ಯರಾದ ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಮಕ್ಕಳು 9 ರಿಂದ 12 ನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡುತ್ತಿರುವವರಿಗೆ ತ್ರೈಮಾಸಿಕ ರೂ.300/- ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ (ವಿದ್ಯಾರ್ಥಿಯು ಅನುತ್ತೀರ್ಣರಾದಲ್ಲಿ ವಿದ್ಯಾರ್ಥಿ ವೇತನ ನೀಡಲಾಗುವುದಿಲ್ಲ).

**ಪೂರಕ ಪೌಷ್ಟಿಕ ಆಹಾರ:**

ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರನ್ನು ಫಲಾನುಭವಿಗಳೆಂದು ಪರಿಗಣಿಸಿ ದಿನಕ್ಕೆ ರೂ.9.50/- ಮೌಲ್ಯದ ಪೂರಕ ಪೌಷ್ಟಿಕ ಆಹಾರವನ್ನು ತಿಂಗಳಲ್ಲಿ 25 ದಿನ ನೀಡಲಾಗುತ್ತಿದೆ.

**ರಾಜ್ಯ ಸರ್ಕಾರದಿಂದ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ ನೀಡಲಾಗುತ್ತಿರುವ ಸೌಲಭ್ಯಗಳು**

**ಹೆಚ್ಚುವರಿ ಗೌರವಧನ:**

ಮಾಹೆಯಾನ ಕಾರ್ಯಕರ್ತೆಯರಿಗೆ ರೂ.5500/-, ಸಹಾಯಕಿಯರಿಗೆ ರೂ.2750/- ಮತ್ತು ಮಿನಿ ಅಂಗನವಾಡಿ ಕಾರ್ಯಕರ್ತೆಯರಿಗೆ ರೂ.2750/- ಹೆಚ್ಚುವರಿ ಗೌರವಧನವನ್ನು ಪಾವತಿಸಲಾಗುತ್ತಿದೆ.

**ರಜೆ:**

ಮೇ ಮಾಹೆಯಲ್ಲಿ 15 ದಿನಗಳ ಬೇಸಿಗೆ ರಜೆ ನೀಡಲಾಗುತ್ತಿದೆ.

**ಮರಣ ಪರಿಹಾರ:**

ಸೇವೆಯಲ್ಲಿರುವಾಗಲೇ ಮರಣ ಹೊಂದುವ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರ ವಾರಸುದಾರರಿಗೆ ರೂ.50,000/- ಗಳ ಮರಣ ಪರಿಹಾರವನ್ನು ನೀಡಲಾಗುತ್ತದೆ.

**ವೈದ್ಯಕೀಯ ವೆಚ್ಚ ಮರುಪಾವತಿ:**

ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರು ಸೇವೆಯಲ್ಲಿರುವಾಗ ತೀವ್ರತರವಾದ ಖಾಯಿಲೆಗಳಿಗೆ ಗುರಿಯಾಗಿ ಚಿಕಿತ್ಸೆಗೊಳಗಾದ ಸಂದರ್ಭದಲ್ಲಿ, ಅಂಗನವಾಡಿ ಕಾರ್ಯಕರ್ತೆಯರಿಗೆ ಹಾಗೂ ಸಹಾಯಕಿಯರಿಗೆ ರೂ.50,000/- ಗಳ ವೈದ್ಯಕೀಯ ವೆಚ್ಚ ಮರುಪಾವತಿ ಸೌಲಭ್ಯ ನೀಡಲಾಗುತ್ತಿದೆ.

**ಅಂತ್ಯಕ್ರಿಯೆಗಾಗಿ ವೆಚ್ಚ:**

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರು ಸೇವೆಯಲ್ಲಿರುವ ಮರಣ ಹೊಂದಿದಾಗ ಅವರ ಅಂತ್ಯಕ್ರಿಯೆಗಾಗಿ ಮರಣ ಪರಿಹಾರದಲ್ಲಿ ಮುಂಗಡವಾಗಿ ರೂ.5,000 /- ನೀಡಲಾಗುತ್ತಿದೆ.

**ಎನ್.ಪಿ.ಎಸ್.ಲೈಟ್ ಪಿಂಚಣಿ ಯೋಜನೆ:**

ರಾಜ್ಯದಲ್ಲಿ ಎನ್.ಪಿ.ಎಸ್. ಯೋಜನೆಯಡಿ ನೋಂದಣಿಯಾಗಿರುವಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರಿಗೆ ವಂತಿಗೆ ಆಧಾರಿತ ನಿವೃತ್ತಿ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಲಾಗಿರುತ್ತದೆ. ನಿವೃತ್ತಿ ವಯಸ್ಸನ್ನು 60 ವರ್ಷಗಳಿಗೆ ನಿಗಧಿಗೊಳಿಸಿದ್ದು ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರು ಸ್ವೀಕರಿಸುವ ಗೌರವಧನದಲ್ಲಿ ಅನುಕ್ರಮವಾಗಿ ರೂ.150/- ಮತ್ತು ರೂ.84/- ಅವರ ವಂತಿಗೆಯಾಗಿ ಭರಿಸುತ್ತಿದ್ದು, ಸಮಪಾಲು ವಂತಿಗೆಯನ್ನು ರಾಜ್ಯ ಸರ್ಕಾರವು ಭರಿಸುತ್ತಿದೆ.

**ಅನುಕಂಪದ ಆಧಾರದಲ್ಲಿ ನೇಮಕ:**

ಸೇವೆಯಲ್ಲಿರುವಾಗಲೇ ಮರಣಹೊಂದುವ ಅಂಗನವಾಡಿ ಕಾರ್ಯಕರ್ತೆ/ ಸಹಾಯಕಿಯರ ಮಗಳಿಗೆ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಹುದ್ದೆಗೆ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಸ್ಥಳೀಯವಾಗಿ ವಾಸ ಇತ್ಯಾದಿ ಆಯ್ಕೆ ಮಾರ್ಗಸೂಚಿಯನ್ವಯ ಎಲ್ಲಾ ಷರತ್ತುಗಳನ್ನು ಪೂರೈಸಿದಲ್ಲಿ ಮೃತ ತಾಯಿಯು ನಿರ್ವಹಿಸುತ್ತಿದ್ದ ಹುದ್ದೆಗೆ ಅನುಕಂಪದ ಆಧಾರದಲ್ಲಿ ನೇಮಕ ಮಾಡಲಾಗುತ್ತದೆ.

**ಮಾತೃಪೂರ್ಣ ಯೋಜನೆ:**

ಗರ್ಭಿಣಿ / ಬಾಣಂತಿ/ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರನ್ನು ಫಲಾನುಭವಿಗಳೆಂದು ಪರಿಗಣಿಸಿ ದಿನಕ್ಕೆ ರೂ.11.50/- ಮೌಲ್ಯದ ಪೂರಕ ಪೌಷ್ಠಿಕ ಆಹಾರವನ್ನು ಬಿಸಿಯೂಟದೊಂದಿಗೆ ತಿಂಗಳಲ್ಲಿ 25 ದಿನ ನೀಡಲಾಗುತ್ತಿದೆ.

ಅನುಬಂಧ - ೨

**ಸರ್ಕಾರಿ ಆದೇಶ ಸಂಖ್ಯೆ: ಮಮಇ 303 ಐಸಿಡಿ 2017, ದಿನಾಂಕ:23.09.2017ಕ್ಕೆ ಅನುಬಂಧ**

# ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರನ್ನು ಆಯ್ಕೆ ಮಾಡಲು ಮಾರ್ಗಸೂಚಿಗಳು ಮತ್ತು ಅರ್ಹತೆಯ ಮಾನದಂಡಗಳು.

## I ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಅರ್ಹತೆ ಮಾನದಂಡಗಳು:-

**1) ವಯೋಮಿತಿ:**

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಲು 18-35 ವರ್ಷ ವಯೋಮಿತಿಯೊಳಗಿರಬೇಕು.

**2) ಸ್ಥಳೀಯತೆ:**

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಸ್ಥಳೀಯರಾಗಿರಬೇಕು.

ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ದಿನಾಂಕದ ಒಂದು(1) ವರ್ಷದೊಳಗೆ ಸಂಬಂಧಪಟ್ಟ ತಹಶೀಲ್ದಾರರಿಂದ / ಉಪ ತಹಶೀಲ್ದಾರರಿಂದ ಪಡೆದ ವಾಸಸ್ಥಳ ದೃಢೀಕರಣ ಪತ್ರವನ್ನು ಕಡ್ಡಾಯವಾಗಿ ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.

**3) ವಿದ್ಯಾರ್ಹತೆ:**

i) **ಅಂಗನವಾಡಿ ಕಾರ್ಯಕರ್ತೆ:** ಎಸ್.ಎಸ್.ಎಲ್.ಸಿ. ತೇರ್ಗಡೆ. ಹೆಚ್ಚಿನ ವಿದ್ಯಾರ್ಹತೆಯನ್ನು ಆಯ್ಕೆಗೆ ಪರಿಗಣಿಸುವಂತಿಲ್ಲ.

ಅ) ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಮುಕ್ತ ಶಾಲೆ / ಮುಕ್ತ ವಿದ್ಯಾಲಯಗಳಲ್ಲಿ ಎಸ್.ಎಸ್.ಎಲ್.ಸಿ ತೇರ್ಗಡೆ ಹೊಂದಿದ ಅಭ್ಯರ್ಥಿಗಳು ಪ್ರಥಮ / ದ್ವಿತೀಯ ಭಾಷೆಯಾಗಿ ಕನ್ನಡ ಹಾಗೂ ಸಾಮಾನ್ಯ ಗಣಿತ ಮತ್ತು ಸಮಾಜಶಾಸ್ತ್ರ / ಸಮಾಜ ವಿಜ್ಞಾನ ವಿಷಯಗಳನ್ನು ಕಡ್ಡಾಯವಾಗಿ ವ್ಯಾಸಂಗ ಮಾಡಿದ್ದು, ಪ್ರಮಾಣ ಪತ್ರ / ಅಂಕಪಟ್ಟಿಯು ಗರಿಷ್ಠ 625, ಕನಿಷ್ಠ 219 ಅಂಕಗಳನ್ನು ಹೊಂದಿದಲ್ಲಿ, ಅಂತಹ ಅಭ್ಯರ್ಥಿಗಳನ್ನು ಪರಿಗಣಿಸತಕ್ಕದ್ದು.

ಆ) ಬೇರೆ ರಾಜ್ಯಗಳ ಶಾಲೆಗಳಲ್ಲಿ ವ್ಯಾಸಂಗ ಮಾಡಿದ್ದು, ಕನ್ನಡವನ್ನು ಪ್ರಥಮ / ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡಿದ್ದರೂ, ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಆ ರಾಜ್ಯದಲ್ಲಿ ನಿಗದಿಪಡಿಸಿದ ಗರಿಷ್ಠ ಹಾಗೂ ಕನಿಷ್ಠ ಅಂಕಗಳು ಹಾಗೂ ಕರ್ನಾಟಕ ರಾಜ್ಯದಲ್ಲಿ ನಿಗದಿಪಡಿಸಿದ ಗರಿಷ್ಠ ಹಾಗೂ ಕನಿಷ್ಠ ಅಂಕಗಳಲ್ಲಿ ವ್ಯತ್ಯಾಸವಿದ್ದಲ್ಲಿ, ಕರ್ನಾಟಕದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳನ್ನು ಮಾತ್ರ ಪರಿಗಣಿಸತಕ್ಕದ್ದು.

ಇ) ಅಂಗನವಾಡಿ ಕಾರ್ಯಕರ್ತೆಯರು ಶಾಲಾ ಪೂರ್ವ ಶಿಕ್ಷಣವನ್ನು ಹಾಗೂ ದಾಖಲೆಗಳನ್ನು ಕನ್ನಡದಲ್ಲಿ ನಿರ್ವಹಿಸಬೇಕಾಗಿರುವುದರಿಂದ ಅಭ್ಯರ್ಥಿಗಳು ಯಾವುದೇ ಭಾಷಾ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ್ದರೂ ಹಾಗೂ ಯಾವುದೇ ರಾಜ್ಯದಲ್ಲಿ ವ್ಯಾಸಂಗ ಮಾಡಿದ್ದರೂ ಸಹ ಅವರು ಕನ್ನಡ ಭಾಷೆಯನ್ನು ಪ್ರಥಮ / ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿರಬೇಕು ಹಾಗೂ ಮಾತೃಭಾಷೆ ಕನ್ನಡವಲ್ಲದೇ ಇರುವ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಆಯ್ಕೆ ಸಮಯದಲ್ಲಿ ಸಂದರ್ಶನ ಏರ್ಪಡಿಸಿ ಹಾಗೂ ಅವಶ್ಯವಿದ್ದಲ್ಲಿ ಕನ್ನಡ ಭಾಷೆಯ ಜ್ಞಾನದ ಕುರಿತಂತೆ ಓದಿಸಿ, ಬರೆಸಿ ಅವರ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಿ ಅವರನ್ನು ಆಯ್ಕೆಯನ್ನು ಮಾಡುವ ಬಗ್ಗೆ ಸಮಿತಿಯವರು ನಿರ್ಧರಿಸುವುದು.

ii) **ಅಂಗನವಾಡಿ ಸಹಾಯಕಿ:**

ಅ) ಕನಿಷ್ಠ 4ನೇ ತರಗತಿ ತೇರ್ಗಡೆ, ಗರಿಷ್ಠ 9ನೇ ತರಗತಿ ತೇರ್ಗಡೆ. ಇದರಲ್ಲಿ ಹೆಚ್ಚಿನ ವಿದ್ಯಾರ್ಹತೆಯುಳ್ಳವರನ್ನು ಆಯ್ಕೆ ಮಾಡಬೇಕು. 9ನೇ ತರಗತಿಗಿಂತ ಹೆಚ್ಚಿನ ವಿದ್ಯಾರ್ಹತೆಯನ್ನು ಆಯ್ಕೆಗೆ ಪರಿಗಣಿಸುವಂತಿಲ್ಲ.

ಆ) ಒಂದೇ ವಿದ್ಯಾರ್ಹತೆಯುಳ್ಳ ಒಂದಕ್ಕಿಂತ ಹೆಚ್ಚು ಅರ್ಜಿ ಬಂದಿದ್ದಲ್ಲಿ ಹೆಚ್ಚು ಅಂಕಗಳಿಸಿದವರನ್ನು ಆಯ್ಕೆ ಮಾಡಬೇಕು.

## II ಅಂಗನವಾಡಿ ಕೇಂದ್ರಗಳ ವ್ಯಾಪ್ತಿ ಗುರ್ತಿಸುವ ಬಗ್ಗೆ:-

1) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರು ಗೌರವಸೇವೆಗೆ ಸೇರಿದೆ, ಅಂಗನವಾಡಿ ಕೇಂದ್ರ ಪ್ರಾರಂಭಿಸುವ ಗ್ರಾಮಾಂತರ ಪ್ರದೇಶದ ಕಂದಾಯ ಗ್ರಾಮ / ನಗರ ಪ್ರದೇಶದ ಕಂದಾಯ ವಾರ್ಡ್‌ನ ಒಟ್ಟು ಜನಸಂಖ್ಯೆಯು ಶೇಕಡ 40ಕ್ಕಿಂತ ಹೆಚ್ಚು ಪರಿಶಿಷ್ಟ ಜಾತಿ ಹಾಗೂ ಶೇಕಡ 40ಕ್ಕಿಂತ ಹೆಚ್ಚು ಪರಿಶಿಷ್ಟ ವರ್ಗದವರನ್ನು ಒಳಗೊಂಡಿದ್ದ ಸಂದರ್ಭದಲ್ಲಿ ಈ ವರ್ಗಗಳ ಪೈಕಿ ಅತೀ ಹೆಚ್ಚು ಜನಸಂಖ್ಯೆಯಿರುವ ವರ್ಗದವರಿಗೆ ಕಾರ್ಯಕರ್ತೆ / ಸಹಾಯಕಿಯ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಬೇಕು. ಪ್ರಕಟಣೆಯಲ್ಲಿ ಸ್ಪಷ್ಟವಾಗಿ ಯಾವ ವರ್ಗದವರಿಗೆ ಹುದ್ದೆಯನ್ನು ನಿಗದಿಪಡಿಸಲಾಗಿದೆಯೆಂದು ಸೂಚಿಸಬೇಕು. ನಿಗದಿಪಡಿಸಿದ ವರ್ಗದವರನ್ನೆ ಆಯ್ಕೆ ಮಾಡುವುದು.

2) ಒಂದು ಗ್ರಾಮದಲ್ಲಿ ಈಗಾಗಲೇ ಅಂಗನವಾಡಿ ಕೇಂದ್ರವಿದ್ದು ಪುನ: ಬೇಡಿಕೆಗೆ ಅನುಸಾರವಾಗಿ ಹೊಸ ಕೇಂದ್ರವನ್ನು ಪ್ರಾರಂಭಿಸುತ್ತಿದ್ದಲ್ಲಿ, ಹೊಸ ಕೇಂದ್ರ ಪ್ರಾರಂಭಿಸುವ ಪ್ರದೇಶದ (ವ್ಯಾಪ್ತಿಯ) ಜನಸಂಖ್ಯೆಯಲ್ಲಿ ಶೇಕಡ 40ಕ್ಕಿಂತ ಹೆಚ್ಚು ಜನಸಂಖ್ಯೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗದವರಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಸದರಿ ವರ್ಗದವರಿಗೆ ಕಾರ್ಯಕರ್ತೆ / ಸಹಾಯಕಿ ಹುದ್ದೆಯನ್ನು ನಿಗದಿಪಡಿಸಿ ಪ್ರಕಟಣೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿ ಆ ವರ್ಗದವರನ್ನೇ ಆಯ್ಕೆ ಮಾಡುವುದು.

3) ಶೇಕಡ 25ಕ್ಕಿಂತ ಹೆಚ್ಚು ಅಲ್ಪಸಂಖ್ಯಾತ (ಮುಸ್ಲಿಮರು, ಕ್ರಿಶ್ಚಿಯನರು, ಜೈನರು, ಬೌದ್ಧರು, ಪಾರ್ಸಿಗಳು ಮತ್ತು ಸಿಕ್ಕರು) ಜನಸಂಖ್ಯೆಯಿರುವ ಪ್ರದೇಶದ ಅಂಗನವಾಡಿ ಕೇಂದ್ರಗಳಲ್ಲಿ ಕನ್ನಡ ಭಾಷೆಯೊಂದಿಗೆ ಆಯಾ ಅಲ್ಪ ಸಂಖ್ಯಾತ ಸಮುದಾಯದ ಭಾಷೆ ಬಲ್ಲವರನ್ನು ಕಾರ್ಯಕರ್ತೆ / ಸಹಾಯಕಿಯ ಹುದ್ದೆಗೆ ಆಯ್ಕೆ ಮಾಡುವುದು.

4) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರಿಗೆ ಕಾರ್ಯಕರ್ತೆ / ಸಹಾಯಕಿ ಹುದ್ದೆ ನಿಗದಿಪಡಿಸಿದ ಅಂಗನವಾಡಿ ಕೇಂದ್ರಗಳಲ್ಲಿ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದಿದ್ದಲ್ಲಿ ಮರುಪ್ರಕಟಣೆಯನ್ನು 7 ದಿವಸಗಳೊಳಗೆ ಹೊರಡಿಸಿ ಪುನ:ಅರ್ಜಿಗಳನ್ನು ಆಹ್ವಾನಿಸಬೇಕು.ಆಗಲೂ ನಿಗದಿತ ವರ್ಗದವರಿಂದ ಅರ್ಜಿಗಳು ಬಾರದೇ ಹೋದಲ್ಲಿ ಪುನ: 10 ದಿನಗಳೊಳಗೆ ಪ್ರಕಟಣೆ ಹೊರಡಿಸಿ ಸಾಮಾನ್ಯ ವರ್ಗದವರಿಂದ ಅರ್ಜಿ ಆಹ್ವಾನಿಸಿ ಆಯ್ಕೆ ಮಾಡುವುದು.

5) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗೆ ಸಂಬಂಧಿಸಿದ ಅಂಗನವಾಡಿ ಕೇಂದ್ರದ ಗ್ರಾಮಾಂತರ ಪ್ರದೇಶದ ಕಂದಾಯ ಗ್ರಾಮ ಹಾಗೂ ನಗರ ಪ್ರದೇಶದ ಕಂದಾಯ ವಾರ್ಡ್‌ಗಳನ್ನು ಪರಿಗಣಿಸಬೇಕು, ಚುನಾವಣಾ ವಾರ್ಡ್‌ಗಳನ್ನು ಪರಿಗಣಿಸುವಂತಿಲ್ಲ.

6) ಒಂದು ಗ್ರಾಮದಲ್ಲಿ ಒಂದಕ್ಕಿಂತ ಹೆಚ್ಚು ಅಂಗನವಾಡಿ ಕೇಂದ್ರಗಳಿದ್ದಾಗ, ಆ ಕೇಂದ್ರ ವ್ಯಾಪ್ತಿಗೆ ಸಂಬಂಧಪಟ್ಟ ಗ್ರಾಮ / ವಾರ್ಡ್‌ರವರಿಂದ ಮಾತ್ರ ಅರ್ಜಿಗಳನ್ನು ಆಹ್ವಾನಿಸಬೇಕು. ಒಂದು ಪಕ್ಷ ಆ ಗ್ರಾಮ / ವಾರ್ಡ್‌ರವರಿಂದ ಅರ್ಜಿಗಳು ಸ್ವೀಕೃತವಾಗದೇ ಹೋದಲ್ಲಿ 7 ದಿವಸಗಳೊಳಗೆ ಮರು ಪ್ರಕಟಣೆ ಹೊರಡಿಸಬೇಕು. ಎರಡನೆಯ ಬಾರಿಯೂ ಸ್ಥಳೀಯರಿಂದ ಅರ್ಜಿ ಸ್ವೀಕೃತವಾಗದಿದ್ದಲ್ಲಿ ಪುನ: 10 ದಿವಸಗಳೊಳಗೆ ಪ್ರಕಟಣೆ ಹೊರಡಿಸಿ ಅತ್ಯಂತ ಸಮೀಪದ ಗ್ರಾಮ / ವಾರ್ಡ್‌ಗಳಿಂದ ಅರ್ಹ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸುವುದು.

7) ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಆಯ್ಕೆಗಾಗಿ ಎರಡನೇ ಬಾರಿಗೆ ಯಾವುದೇ ಮರು ಪ್ರಕಟಣೆ ಹೊರಡಿಸುವ ಮುನ್ನ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಸ್ವತ: ಗ್ರಾಮ / ವಾರ್ಡ್‌ಗೆ ಭೇಟಿ ನೀಡಿ ಆ ವರ್ಗದ / ಗ್ರಾಮದ / ವಾರ್ಡ್‌ನ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲವೆಂಬ ಬಗ್ಗೆ ಸ್ಥಳ ಪರಿಶೀಲನಾವರದಿ ಪಡೆದುಕೊಂಡಿರಬೇಕು.

8) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಆಯ್ಕೆಗಾಗಿ ಪ್ರಕಟಣೆಯನ್ನು ಸ್ಪಷ್ಟ / ನಿಖರವಾಗಿ ಹೊರಡಿಸತಕ್ಕದ್ದು. ಹುದ್ದೆ ಖಾಲಿಯಿರುವ ಸ್ಥಳ, ಆ ಹುದ್ದೆ ಜನಸಂಖ್ಯೆ ಆಧಾರದಲ್ಲಿ ಯಾವ ವರ್ಗಕ್ಕೆ ನಿಗದಿಪಡಿಸಲಾಗಿದೆ ಎಂಬ ಬಗ್ಗೆ ತಿಳಿಸಿ ಸ್ಥಳೀಯ ದಿನಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸತಕ್ಕದ್ದು. ಪ್ರಕಟಣೆಯನ್ನು ಗ್ರಾಮದ ಕೃಷಿ ಸಂಪರ್ಕ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ, ಶಾಲೆ, ಗ್ರಾಮ ಲೆಕ್ಕಿಗರ

ಕಛೇರಿ, ಅಂಗನವಾಡಿ ಕಟ್ಟಡ, ಗ್ರಾಮ ಪಂಚಾಯತ್ ಕಛೇರಿ ಕಟ್ಟಡ ಹಾಗೂ ಇನ್ನಿತರ ಸಾರ್ವಜನಿಕ ಸ್ಥಳಗಳಲ್ಲಿ ಸೂಚನಾ ಫಲಕದ ಮೇಲೆ ಪ್ರದರ್ಶಿಸತಕ್ಕದ್ದು. ಪ್ರಕಟಣೆ ಹೊರಡಿಸಿದ ದಿನಾಂಕದಿಂದ 25 ದಿನಗಳೊಳಗೆ ಅರ್ಜಿ ಸಲ್ಲಿಸುವ ಕಾಲಾವಧಿಯನ್ನು ನಿಗದಿಪಡಿಸಿರತಕ್ಕದ್ದು ಹಾಗೂ ಪ್ರಕಟಣೆಯ ಪ್ರತಿಯನ್ನು ಆಯ್ಕೆ ಸಮಿತಿಯ ಎಲ್ಲಾ ಸದಸ್ಯರಿಗೂ ಕಳುಹಿಸತಕ್ಕದ್ದು.

9) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿ ಹುದ್ದೆಗೆ ಅರ್ಜಿ ಸಲ್ಲಿಸಿದವರಲ್ಲಿ ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳು ಸಮಾನ ಅಂಕ ಗಳಿಸಿದ್ದಲ್ಲಿ ವಯೋಹಿರಿತನವನ್ನು ಪರಿಗಣಿಸಬೇಕು. ವಯಸ್ಸು ಸಮಾನವಾಗಿದ್ದಲ್ಲಿ ವಿವಾಹಿತರನ್ನು ಪರಿಗಣಿಸಬೇಕು.

10) ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಾದ / ಹೊಸ ಕೇಂದ್ರಕ್ಕೆ ಅರ್ಹ ಸಹಾಯಕಿಯರಿಂದ ಕಾರ್ಯಕರ್ತೆ ಹುದ್ದೆ ಕೋರಿ ಅರ್ಜಿ ಸ್ವೀಕೃತವಾಗಿದ್ದಲ್ಲಿ, ಅವರನ್ನೇ ಆಯ್ಕೆ ಮಾಡತಕ್ಕದ್ದು. ಅಂತಹ ಯಾವುದೇ ಅರ್ಜಿಗಳು ಸ್ವೀಕೃತವಾಗಿಲ್ಲದಿದ್ದಲ್ಲಿ, ಸ್ಥಾನಪಲ್ಲಟ ಕೋರಿ ಬಂದಿರುವ ಅರ್ಜಿಗಳನ್ನು ಪರಿಗಣಿಸುವುದು. ಸ್ಥಾನಪಲ್ಲಟ ಕೋರಿ ಯಾವುದೇ ಅರ್ಜಿಗಳು ಸ್ವೀಕೃತವಾಗಿಲ್ಲದಿದ್ದಲ್ಲಿ ಹೊಸದಾಗಿ ಆಯ್ಕೆ ಮಾಡುವ ಪ್ರಕ್ರಿಯೆಯನ್ನು ಪ್ರಾರಂಭಿಸಿ ಗರಿಷ್ಠ 2 ತಿಂಗಳೊಳಗೆ ಮುಗಿಸತಕ್ಕದು.

11) ಸ್ಥಳೀಯ ಚುನಾಯಿತ ಪ್ರತಿನಿಧಿಗಳು ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಿದ್ದು, ಆಯ್ಕೆಯಾಗುವ ಸಂಭವವಿದ್ದಲ್ಲಿ, ಆಯ್ಕೆ ಪಟ್ಟಿ ಪ್ರಕಟಿಸುವ ಮುನ್ನ ಚುನಾಯಿತ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ರಾಜೀನಾಮೆ ಅಂಗೀಕೃತ ಪತ್ರ ನೀಡಬೇಕಾಗಿರುವುದು ಕಡ್ಡಾಯ. ಅಂದರೆ ಯಾವುದಾದರೂ ಒಂದು ಸ್ಥಾನದಲ್ಲಿ ಮಾತ್ರ ಕೆಲಸ ನಿರ್ವಹಿಸಲು ಅವಕಾಶವಿದೆ.

## III) ಆಯ್ಕೆ ಆದ್ಯತೆ :

ಈ ಕೆಳಕಂಡಂತೆ ಆದ್ಯತೆ ಪಡೆಯಲು ಇಚ್ಛಿಸುವ ಅರ್ಜಿದಾರರು ನಿಗದಿತ ವಿದ್ಯಾರ್ಹತೆ ಹೊಂದಿದ್ದು, ವಯೋಮಿತಿಯೊಳಗೆ ಮತ್ತು ಸ್ಥಳೀಯರಾಗಿರಬೇಕಾಗಿರುವುದು ಕಡ್ಡಾಯ.

### 1) ಆಸಿಡ್ ದಾಳಿಗೊಳಗಾದವರ ಆಯ್ಕೆ:-

ಆಸಿಡ್ ದಾಳಿಗೆ ತುತ್ತಾದ ಮಹಿಳೆಯರು ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ, ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸದೆ ಮೊದಲ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು

### 2) ಇಲಾಖೆಯ ಸಂಸ್ಥೆಗಳ ನಿವಾಸಿಗಳ ಆಯ್ಕೆ:-

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗಳಿಗೆ ಬಾಲನ್ಯಾಯ ಕಾಯ್ದೆಯಡಿ ಇಲಾಖೆಯ ಸಂಸ್ಥೆಗಳಲ್ಲಿ ಹಾಗೂ ರಾಜ್ಯ ಮಹಿಳಾ ನಿಲಯಗಳಲ್ಲಿ ಆಶ್ರಯ ಪಡೆದ ಹಾಲಿ / ಮಾಜಿ ನಿವಾಸಿಗಳು ಅರ್ಜಿ ಸಲ್ಲಿಸಿದಾಗ ಮಾರ್ಗಸೂಚಿಯ ಕ್ರಮ ಸಂಖ್ಯೆ **III (1)** ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸಿದೆ ಎರಡನೆ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು

### 3) ವಿಧವೆಯರ ಆಯ್ಕೆ:-

ಅ) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಹುದ್ದೆಗಳಿಗೆ ವಿಧವೆಯರು ಅರ್ಜಿ ಸಲ್ಲಿಸಿದಾಗ ಮಾರ್ಗಸೂಚಿಯ **III (1)** ಮತ್ತು **(2)** ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸಿದೆ ಮೂರನೆ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು ಅರ್ಜಿ ಸಲ್ಲಿಸಿದ ನಂತರ ವಿಧವೆಯಾದಲ್ಲಿ ಪರಿಗಣಿಸುವಂತಿಲ್ಲ.

ಆ) ವಿಧವೆಯರಲ್ಲಿ, ಆತ್ಮಹತ್ಯೆ ಮಾಡಿಕೊಂಡ ರೈತರ ಪತ್ನಿಗೆ (ವಿಧವೆಗೆ) ಪ್ರಥಮ ಆದ್ಯತೆ ನೀಡತಕ್ಕದ್ದು

ಇ) ವಿಧವೆಯರು ತಾವು ಪ್ರಸ್ತುತ ಎಲ್ಲಿ ವಾಸವಿರುವುದಾಗಿ, ವಾಸಸ್ಥಳ ದೃಢೀಕರಣವನ್ನು ಸಲ್ಲಿಸಿರುತ್ತಾರೆ, ಆ ಸ್ಥಳವನ್ನೇ ಅವರ ವಾಸಸ್ಥಳವೆಂದು ಪರಿಗಣಿಸತಕ್ಕದ್ದು.

ಈ) ಒಂದೇ ಹುದ್ದೆಗೆ ಇಬ್ಬರು ವಿಧವೆಯರು ಅರ್ಜಿ ಸಲ್ಲಿಸಿದ್ದಲ್ಲಿ ಗರಿಷ್ಠ ಅಂಕ ಪಡೆದವರನ್ನು ಆ ಮಾಡಬಹುದಾಗಿದೆ.

4) **ಅಂಗವಿಕಲರ ಆಯ್ಕೆ:-**

ಇ) ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗಳಿಗೆ ಅಂಗವಿಕಲರು ಅರ್ಜಿ ಸಲ್ಲಿಸಿದಾಗ, ಮಾರ್ಗಸೂಚಿಯ **III (1) (2)** ಮತ್ತು **(3)** ನೆಯವರನ್ನು ಹೊರತು ಪಡಿಸಿ ಇತರ ಎಲ್ಲಾ ಸ್ವೀಕೃತ ಅರ್ಜಿಗಳನ್ನು ಪರಿಗಣಿಸಿದೆ ನಾಲ್ಕನೆ ಆದ್ಯತೆ ಮೇರೆಗೆ ನೇರವಾಗಿ ಅವರನ್ನೆ ಆಯ್ಕೆ ಮಾಡತಕ್ಕದ್ದು

ಈ) ಅಂಗವಿಕಲರು ಪ್ರಸ್ತುತ ತಾವು ಎಲ್ಲಿ ವಾಸವಾಗಿರುವುದಾಗಿ ವಾಸಸ್ಥಳ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೋ ಆ ಸ್ಥಳವನ್ನೆ ಅವರ ವಾಸಸ್ಥಳವೆಂದು ಪರಿಗಣಿಸತಕ್ಕದ್ದು.

ಉ) ಅಂಗನವಾಡಿ ಕಾರ್ಯಕರ್ತೆ ಹುದ್ದೆಯಲ್ಲಿ 3-6 ವರ್ಷ ಮಕ್ಕಳಿಗೆ ಆಟ ಮತ್ತು ಅಭಿನಯ ಗೀತೆಗಳ ಮೂಲಕ ಶಾಲಾ ಪೂರ್ವ ಶಿಕ್ಷಣವನ್ನು ನೀಡಲಾಗುತ್ತಿದ್ದು ಚಟುವಟಿಕೆ ವೇಳೆಯಲ್ಲಿ ಮಕ್ಕಳನ್ನು ಹಿಡಿದೆತ್ತಿ ನಿಲ್ಲಿಸಲು ಹಾಗೂ ಅಭಿನಯ ಮಾಡಿ ತೋರಿಸಬೇಕಾಗಿರುತ್ತದೆ. ವೃತ್ತಸಭೆ, ತಾಯಂದಿರ ಸಭೆ ಮತ್ತು ಮನೆ ಭೇಟಿ ನಿರ್ವಹಿಸಬೇಕಾಗಿರುತ್ತದೆ. ಆದ ಕಾರಣ ಕಿವುಡರು ಮತ್ತು ಮೂಕರು, ಕುರುಡರು, ಬುದ್ಧಿ ಮಾಂದ್ಯರು, ಮಾನಸಿಕ ಅಸ್ವಸ್ಥರು ಕಾರ್ಯಕರ್ತೆ ಹುದ್ದೆಗೆ ಅರ್ಹರಲ್ಲ.

ಊ) ಅಂಗನವಾಡಿ ಸಹಾಯಕಿಯ ಹುದ್ದೆಯಲ್ಲಿ ಅಂಗನವಾಡಿ ಫಲಾನುಭವಿಗಳಿಗೆ ಪೂರಕ ಪೌಷ್ಠಿಕ ಆಹಾರವನ್ನು ಬೇಯಿಸಿ / ಸಿದ್ಧಪಡಿಸಿ ಉಣಬಡಿಸುವುದು, ಕೇಂದ್ರವನ್ನು ಸ್ವಚ್ಛಗೊಳಿಸುವುದು, ಮಕ್ಕಳನ್ನು ಅವರ ಮನೆಗಳಿಂದ ಕೇಂದ್ರಕ್ಕೆ ಕರೆತರುವುದು ಹಾಗೂ ಕಾರ್ಯಕರ್ತೆಯು ವೃತ್ತಸಭೆ, ತಾಯಂದಿರ ಸಭೆ ಮತ್ತು ಮನೆ ಭೇಟಿಗೆ ಹೋದಾಗ ಅಂಗನವಾಡಿ ಕೇಂದ್ರದ ಜವಾಬ್ದಾರಿಯನ್ನು ನಿರ್ವಹಿಸಬೇಕು. ಆದ್ದರಿಂದ ಸಹಾಯಕಿ ಹುದ್ದೆಗೆ ಅಂಗವಿಕಲ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.

ಋ) ಇತರೆ ದೈಹಿಕ ಅಂಗವೈಕಲ್ಯತೆ ಶೇ.60 ಮೀರದಂತೆ ಇರುವವರು ಅರ್ಜಿ ಸಲ್ಲಿಸಬಹುದಾಗಿದೆ. ಅಂಗೀಕೃತ ಪ್ರಾಧಿಕಾರ(ಜಿಲ್ಲಾ ವೈದ್ಯಕೀಯ ಮಂಡಳಿ)ದಿಂದ ಪಡೆದ ಪ್ರಮಾಣ ಪತ್ರವನ್ನು ಅರ್ಜಿಯೊಂದಿಗೆ ಹಾಜರುಪಡಿಸಬೇಕು.

ಎ) ಅಂಗವಿಕಲ ಅಭ್ಯರ್ಥಿಗಳನ್ನು ಆಯ್ಕೆಮಾಡುವ ಸಂದರ್ಭದಲ್ಲಿ ಅಂಗವಿಕಲತೆಯ ಪ್ರಮಾಣದ ಬಗ್ಗೆ ಸಂಶಯ ಉಂಟಾದಲ್ಲಿ ಆ ಅಭ್ಯರ್ಥಿಯನ್ನು ಆಯ್ಕೆ ಸಮಿತಿಯ ಮುಂದೆ ಖುದ್ದು ಹಾಜರಾಗಲು ಸೂಚಿಸಿ ಸದರಿ ಹುದ್ದೆ ನಿರ್ವಹಿಸಲು ಸಮರ್ಥರಿರುವ ಬಗ್ಗೆ ಸಮಿತಿಯೇ ಪರಿಶೀಲಿಸಿ ನಿರ್ಧರಿಸತಕ್ಕದ್ದು.

ಋ) ಒಂದೇ ಹುದ್ದೆಗೆ ಇಬ್ಬರು ಅಂಗವಿಕಲರು ಅರ್ಜಿ ಸಲ್ಲಿಸಿದ್ದಲ್ಲಿ ಗರಿಷ್ಠ ಅಂಕ ಪಡೆದವರನ್ನು ಆಯ್ಕೆ ಮಾಡಬಹುದಾಗಿದೆ.

IV) **ಬೋನಸ್ ಅಂಕಗಳು:- (ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರಿಗೆ)**

1) ಮಾಜಿ ದೇವದಾಸಿಯ ಮಗಳು,

2) ಯೋಜನಾ ನಿರಾಶ್ರಿತರು

3) ವಿಚ್ಛೇದಿತ ಮಹಿಳೆಯರು,

4) ಪರಿತ್ಯಕ್ತೆಯರು

ಹೆಚ್ಚಿನ 5 ಬೋನಸ್ ಅಂಕಗಳಿಗೆ ಅರ್ಹರಾಗಿರುತ್ತಾರೆ. ಪ್ರತಿ ವಿನಾಯಿತಿಗೂ 5 ಬೋನಸ್ ಅಂಕ ನೀಡುವುದು, ಆದರೆ ಯಾವುದೇ ಕಾರಣಕ್ಕೂ ಅವರು ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಕ್ಕೆ ಶೇಕಡಾ 5(5%) ಅಂಕ ನೀಡುವಂತಿಲ್ಲ. ಉದಾ: ಒಬ್ಬ ಅಭ್ಯರ್ಥಿಯು ನಿರಾಶ್ರಿತರು, ಪರಿತ್ಯಕ್ತೆ, ಮಾಜಿ ದೇವದಾಸಿ, ವಿಚ್ಛೇದಿತರು ಆಗಿದ್ದಲ್ಲಿ ಪ್ರತಿ ವಿನಾಯಿತಿಗೂ 5 ಬೋನಸ್ ಅಂಕಗಳನ್ನು ನೀಡುವುದು. ಅಂದರೆ ಸದರಿಯವರು ನಿಗದಿತ ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳಿಗೆ ಮಾಜಿ ದೇವದಾಸಿಯರ ಅವಿವಾಹಿತ ಹೆಣ್ಣು ಮಕ್ಕಳು +5, ಯೋಜನಾ ನಿರಾಶ್ರಿತರು +5, ವಿಚ್ಛೇದಿತ ಮಹಿಳೆಯರು +5, ಪರಿತ್ಯಕ್ತೆಯರು +5, ಒಟ್ಟು 20 ಬೋನಸ್ ಅಂಕಗಳನ್ನು ನೀಡುವುದು. ಬೋನಸ್ ಅಂಕ ಪಡೆಯಲು ಸಂಬಂಧಿತ ದಾಖಲೆಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕಾಗಿರುವುದು ಕಡ್ಡಾಯ.

## V) ಆನ್-ಲೈನ್ ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು:-

1) ಅರ್ಜಿ ನಿಗದಿತ ನಮೂನೆಯಲ್ಲಿ. (ಆನ್-ಲೈನ್)
2) ಜನನ ಪ್ರಮಾಣ ಪತ್ರ / ಜನ್ಮ ದಿನಾಂಕ ಇರುವ ಎಸ್.ಎಸ್.ಎಲ್.ಸಿ ಅಂಕ ಪಟ್ಟಿ
3) ನಿಗದಿತ ವಿದ್ಯಾರ್ಹತೆಯ ಅಂಕಪಟ್ಟಿ.
4) ತಹಶೀಲ್ದಾರರು/ ಉಪತಹಶೀಲ್ದಾರರಿಂದ ಪಡೆದ ಒಂದು(1)ವರ್ಷದೊಳಗಿನ ವಾಸಸ್ಥಳ ದೃಢೀಕರಣ ಪತ್ರ.
5) ಅಭ್ಯರ್ಥಿಗಳ ಜಾತಿ ಪ್ರಮಾಣ ಪತ್ರ.
6) ಪತಿಯ ಮರಣ ಪ್ರಮಾಣ ಪತ್ರ (ವಿಧವಾ ವೇತನದ ಧೃಢೀಕರಣವನ್ನು ಪರಿಗಣಿಸುವಂತಿಲ್ಲ).
7) ಆತ್ಮಹತ್ಯೆ ಮಾಡಿಕೊಂಡ ರೈತರ ಪತ್ನಿ ಎಂದು ಉಪ ವಿಭಾಗಾಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ
8) ಅಂಗವಿಕಲತೆ ಪ್ರಮಾಣ ಪತ್ರ (ಅಂಗವಿಕಲ ವೇತನದ ಧೃಢೀಕರಣವನ್ನು ಪರಿಗಣಿಸುವಂತಿಲ್ಲ).
9) ವಿಚ್ಛೇಧನ ಪ್ರಮಾಣ ಪತ್ರ. ( ನ್ಯಾಯಾಲಯದಿಂದ ಪಡೆದಿರಬೇಕು)
10) ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವತಿಯಿಂದ ನಡೆಸಲ್ಪಟ್ಟ ಮಾಜಿ ದೇವದಾಸಿಯರ ಸಮೀಕ್ಷೆಯ ಪಟ್ಟಿಯಲ್ಲಿರುವ ಮಾಜಿ ದೇವದಾಸಿಯರ ಮಕ್ಕಳು ಎಂಬುದರ ಬಗ್ಗೆ ಮಹಿಳಾ ಅಭಿವೃದ್ಧಿ ನಿಗಮದ ಅಧಿಕಾರಿಗಳಿಂದ ಪ್ರಮಾಣ ಪತ್ರ.
11) ಪರಿತ್ಯಕ್ತೆ ಬಗ್ಗೆ ಗ್ರಾಮಪಂಚಾಯ್ತಿಯಿಂದ ಪಡೆದ ಪ್ರಮಾಣ ಪತ್ರ.
12) ಇಲಾಖೆಯ ಸುಧಾರಣಾ ಸಂಸ್ಥೆ / ರಾಜ್ಯ ಮಹಿಳಾ ನಿಲಯಗಳ ನಿವಾಸಿ ಬಗ್ಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ.
13) ಯೋಜನಾ ನಿರಾಶ್ರಿತರ ಬಗ್ಗೆ ತಹಶೀಲ್ದಾರರಿಂದ ಪಡೆದ ಪ್ರಮಾಣ ಪತ್ರ.

## VI) ಆಯ್ಕೆ ವಿಧಾನ:-

1) ಅರ್ಜಿ ಸಲ್ಲಿಸಲು ನಿಗಧಿ ಪಡಿಸಿರುವ ಕೊನೆಯ ದಿನಾಂಕದ ನಂತರ ಮುಂದಿನ 7 ಕೆಲಸದ ದಿನಗಳೊಳಗೆ ಸಮಿತಿ ಸಭೆ ಸೇರಬೇಕು.

2) ಆಯ್ಕೆ ಸಮಿತಿಯ ಎಲ್ಲಾ ಸದಸ್ಯರು ಹಾಜರಾಗಲು ಸಾಧ್ಯವಾಗದಂತಹ ಅನಿವಾರ್ಯ ಕಾರಣಗಳಿದ್ದಲ್ಲಿ ಕನಿಷ್ಠ 2/3 ರಷ್ಟು ಸದಸ್ಯರು ಕಡ್ಡಾಯವಾಗಿ ಹಾಜರಿರಬೇಕು.

3) ಆನ್-ಲೈನ್ ನಲ್ಲಿ ಹಾಕಿದ್ದ ಎಲ್ಲಾ ಅರ್ಜಿಗಳನ್ನು ಅಂದೇ ಪರಿಶೀಲಿಸುವುದು.

4) ಆನ್-ಲೈನ್ ಅರ್ಜಿಯೊಂದಿಗೆ ಯಾವುದೇ ಅಗತ್ಯ ದಾಖಲೆಯನ್ನು ಸಲ್ಲಿಸದೇ ಇದ್ದಲ್ಲಿ ಅಂತಹ ಅರ್ಜಿಗಳ ತಿರಸ್ಕರಿಸುವುದು.

5) ಸ್ವೀಕೃತವಾದ ಅರ್ಜಿಗಳನ್ನು ವಿದ್ಯಾರ್ಹತೆಯಲ್ಲಿ ಪಡೆದ ಅಂಕ ಮತ್ತು ಬೋನಸ್ ಅಂಕಗಳನ್ನು ಒಳಗೊಂಡಂತೆ ಪಡೆದ ಒಟ್ಟು ಅಂಕಗಳಿಗನುಸಾರವಾಗಿ ಕ್ರೋಢೀಕೃತ ಪಟ್ಟಿಯನ್ನು ಆನ್-ಲೈನ್‌ನಲ್ಲಿ ಸಿದ್ದಪಡಿಸಿ, ಅರ್ಹತೆ ಮತ್ತು ಮೆರಿಟ್‌ಗನುಸಾರವಾಗಿ ಪರಿಶೀಲಿಸಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಅಂದೇ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಸೂಚನಾ ಫಲಕದಲ್ಲಿ ಪ್ರಕಟಿಸುವುದು.

6) ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸಲು ಒಂದು ವಾರ(7 ದಿನಗಳು) ಕಾಲಾವಕಾಶ ನೀಡುವುದು ಹಾಗೂ ಕಾಲಾವಕಾಶ ಮುಗಿದ ಮುಂದಿನ ಕೆಲಸದ ದಿನವೇ ಸಮಿತಿಯ ಸಭೆ ಕರೆದು ಆಕ್ಷೇಪಣೆಗಳು ಸ್ವೀಕೃತವಾದಲ್ಲಿ ಅವುಗಳನ್ನು ಕ್ರೋಢೀಕರಿಸಿ ಚರ್ಚಿಸಿ ಕಾರ್ಯಕರ್ತೆ / ಸಹಾಯಕಿಯರ ಅಂತಿಮ ಆಯ್ಕೆಪಟ್ಟಿಯನ್ನು ಅಂದೇ ಸೂಚನಾ ಫಲಕದಲ್ಲಿ ಪ್ರಕಟಿಸುವುದು.

7) ಆಯ್ಕೆ ಪ್ರಕ್ರಿಯೆಯಲ್ಲಿ ಯಾವುದೇ ಸಮಸ್ಯೆ ಕಂಡು ಬಂದಲ್ಲಿ ನೇಮಕಾತಿ ಪ್ರಾಧಿಕಾರವೇ ಚರ್ಚಿಸಿ ನಿಯಮಾನುಸಾರ ಕ್ರಮವಹಿಸುವುದು. ಆಯ್ಕೆ ಸಮಿತಿಯ ನಿರ್ಧಾರವೇ ಅಂತಿಮವಾಗಿರುತ್ತದೆ.

8) ಆಯ್ಕೆ ನಡವಳಿ ಮಸ್ತಕದಲ್ಲಿ ಆಯ್ಕೆ ಸಮಿತಿಗೆ ಹಾಜರಾದ ಎಲ್ಲಾ ಸದಸ್ಯರ ಹಾಜರಾತಿ ಪಡೆಯುವುದು. ಆಯ್ಕೆ ಪ್ರಕ್ರಿಯೆ ಮುಗಿದ ನಂತರ ನಡವಳಿಗಳನ್ನು ಸವಿವರ(speaking order)ವಾಗಿ, ಕೇಂದ್ರವಾರು ಆಯ್ಕೆಯಾದ ಅಭ್ಯರ್ಥಿಗಳ ಹೆಸರುಗಳನ್ನು ಯಾವ ಮಾನದಂಡಗಳನ್ವಯ ಆಯ್ಕೆ ಮಾಡಲಾಗಿದೆ ಎಂಬ ಷರಾದೊಂದಿಗೆ ನಡವಳಿಯಲ್ಲಿ ದಾಖಲಿಸಿ ಯಾವುದೇ ತಿದ್ದುಪಡಿಗಳಿದ್ದಲ್ಲಿ ಸಕಾರಣದೊಂದಿಗೆ ದೃಢೀಕರಿಸಿ ಹಾಜರಿರುವ ಆಯ್ಕೆ ಸಮಿತಿಯ ಎಲ್ಲಾ ಸದಸ್ಯರ ಸಹಿಯನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

9) ಸಂಬಂಧಪಟ್ಟ ಜಿಲ್ಲೆಯ ಉಪನಿರ್ದೇಶಕರು ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರಾಗಿ ಕಾರ್ಯನಿರ್ವಹಿಸಲು ನೇಮಕಾತಿ ಆದೇಶಗಳನ್ನು ಹೊರಡಿಸಬೇಕು.

10) ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯ ಹುದ್ದೆಯು ಸಂಪೂರ್ಣವಾಗಿ ಗೌರವ ಸೇವೆಯಾಗಿದ್ದು, ಖಾಯಂ ಹುದ್ದೆಯಲ್ಲವೆಂದು ನೇಮಕಾತಿ ಆದೇಶದಲ್ಲಿ ತಿಳಿಸಬೇಕು. ಆಯ್ಕೆಯಾದ ಅಭ್ಯರ್ಥಿಗಳು ವರದಿ ಮಾಡಿಕೊಳ್ಳುವ ಸಮಯದಲ್ಲಿ ಮೂಲ ದಾಖಲಾತಿಗಳು, ವೈದ್ಯಕೀಯ ಪ್ರಮಾಣ ಪತ್ರ (ಫಿಟ್‌ನೆಸ್ ಸರ್ಟಿಫಿಕೆಟ್) ಗಳನ್ನು ಹಾಜರು ಪಡಿಸಿ ಸಂಬಂಧಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪರಿಶೀಲಿಸಿ ವರದಿ ಮಾಡಿಸಿಕೊಳ್ಳತಕ್ಕದ್ದು.

## VIII) ಅಂಗನವಾಡಿ ಸಹಾಯಕಿಯರನ್ನು ಕಾರ್ಯಕರ್ತೆಯರನ್ನಾಗಿ ಆಯ್ಕೆ ಮಾಡುವ ಬಗ್ಗೆ:

1) ಅಂಗನವಾಡಿ ಕಾರ್ಯಕರ್ತೆ ಹುದ್ದೆ ಖಾಲಿಯಿರುವ / ಹೊಸಕೇಂದ್ರ ಪ್ರಾರಂಭಿಸುತ್ತಿರುವ ಗ್ರಾಮದಲ್ಲಿ ವಾಸಿಸುತ್ತಿರುವ ಸಹಾಯಕಿಯರಿದ್ದು, ಅವರು ಎಸ್.ಎಸ್.ಎಲ್.ಸಿ ಉತ್ತೀರ್ಣರಾಗಿದ್ದು, ಕನಿಷ್ಠ 3 ವರ್ಷ ಸೇವೆ ಸಲ್ಲಿಸಿದ್ದು, 45 ವರ್ಷ ವಯೋಮಿತಿಯೊಳಗಿದ್ದು, ಆ ಅಂಗನವಾಡಿ ಕೇಂದ್ರದಿಂದ 3 ಕಿ.ಮೀ. ವ್ಯಾಪ್ತಿಯೊಳಗೆ ವಾಸಿಸುತ್ತಿದ್ದು, ಕಾರ್ಯಕರ್ತೆ ಹುದ್ದೆಗೆ ಅರ್ಜಿ ಸಲ್ಲಿಸಿದ್ದಲ್ಲಿ ಆ ಅಂಗನವಾಡಿ ಕೇಂದ್ರಕ್ಕೆ ಕಾರ್ಯಕರ್ತೆ ಹುದ್ದೆಗೆ ಬೇರೆ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಪ್ರಮೇಯವಿರುವುದಿಲ್ಲ. ಸದರಿ ಸಹಾಯಕಿಯನ್ನೇ ಕಾರ್ಯಕರ್ತೆ ಹುದ್ದೆಗೆ ಆಯ್ಕೆ ಮಾಡತಕ್ಕದ್ದು. ಈ ಬಗ್ಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಆಯ್ಕೆ ಸಮಿತಿಯ ಅಧ್ಯಕ್ಷರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಅನುಮೋದನೆ ಪಡೆದು ಆದೇಶ ಹೊರಡಿಸತಕ್ಕದ್ದು.

2) ಒಂದೇ ಗ್ರಾಮದಲ್ಲಿ ಇಬ್ಬರು ಎಸ್.ಎಸ್.ಎಲ್.ಸಿ ಪಾಸಾದ ಅರ್ಹ ಸಹಾಯಕಿಯರಿದ್ದು ಅರ್ಜಿ ಸಲ್ಲಿಸಿದಲ್ಲಿ ಅವರ ಸೇವಾಹಿರಿತನವನ್ನು ಪರಿಗಣಿಸುವುದು. ಸೇವಾಹಿರಿತನವೂ ಒಂದೇ ಆಗಿದ್ದಲ್ಲಿ ವಯೋಹಿರಿಯರನ್ನು ಪರಿಗಣಿಸಬೇಕು.

**VIII) ಅನುಕಂಪದ ಆಧಾರದಲ್ಲಿ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಹುದ್ದೆಗೆ ಗುರುತಿಸುವ ಬಗ್ಗೆ**

1. ಸೇವೆಯಲ್ಲಿರುವಾಗಲೇ ಮರಣಹೊಂದುವ ಅಂಗನವಾಡಿ ಕಾರ್ಯಕರ್ತೆ/ಸಹಾಯಕಿಯರ ಅವಿವಾಹಿತ ಮಗಳನ್ನು ಅವರ ತಾಯಿಯು ನಿರ್ವಹಿಸುತ್ತಿದ್ದ ಹುದ್ದೆಗೆ ಅನುಕಂಪದ ಆಧಾರದಲ್ಲಿ ಇತರೆ ಕುಟುಂಬದ ಸದಸ್ಯರಿಂದ ನಿರಾಪೇಕ್ಷಣಾ ಪತ್ರವನ್ನು ನಿಗಧಿತ ಮೊತ್ತದ ಛಾಪಾಕಾಗದದ ಮೇಲೆ ಪಡೆದು ನೇಮಕ ಮಾಡತಕ್ಕದ್ದು.
2. ಅಭ್ಯರ್ಥಿಯ ನಿಗಧಿತ ವಿದ್ಯಾರ್ಹತೆ, ವಯೋಮಿತಿ ಮತ್ತು ಸ್ಥಳೀಯರಾಗಿಬೇಕಾಗಿರುವುದು ಕಡ್ಡಾಯ.

**IX) ಶಿಸ್ತು ಪ್ರಾಧಿಕಾರ:-**

ಅಂಗನವಾಡಿ ಕಾರ್ಯಕರ್ತೆ / ಸಹಾಯಕಿಯರ ಕಾರ್ಯನಿರ್ವಹಣೆಯಲ್ಲಿ ಯಾವುದೇ ನ್ಯೂನತೆಗಳ ಬಗ್ಗೆ ದೂರುಗಳು ಸ್ವೀಕೃತಗೊಂಡಲ್ಲಿ, ಅವುಗಳನ್ನು ಪರಿಶೀಲಿಸಿ ಇವರನ್ನು ಸೇವೆಯಿಂದ ವಜಾಗೊಳಿಸುವ ಅಧಿಕಾರವು ಜಿಲ್ಲಾಧಿಕಾರಿಗಳು / ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ / ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಇರುತ್ತದೆ.

# ಕರ್ನಾಟಕ ಸರ್ಕಾರ

ಸಂಖ್ಯೆ:ಮಮಇ 54 ಪಿಹೆಚ್‌ಪಿ 2020

ಕರ್ನಾಟಕ ಸರ್ಕಾರ ಸಚಿವಾಲಯ
3ನೇ ಗೇಟ್, ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:10.03.2020

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ,
ಬಹುಮಹಡಿಗಳ ಕಟ್ಟಡ, ಬೆಂಗಳೂರು-1.

124
4/5
11/3/20

ಇವರಿಗೆ;
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು-560 001.

ಮಾನ್ಯರೆ,

ವಿಷಯ: ಶ್ರೀ ರಾಜ್‌ಕುಮಾರ್ ಪಾಟೀಲ್, ಮಾನ್ಯ ವಿಧಾನ ಸಭಾ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:946ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

ಉಲ್ಲೇಖ: ಕರ್ನಾಟಕ ವಿಧಾನಸಭಾ ಸಚಿವಾಲಯದ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.946/2020, ದಿ:29.02.2020.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ರಾಜ್‌ಕುಮಾರ್ ಪಾಟೀಲ್, ಮಾನ್ಯ ವಿಧಾನ ಸಭಾ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:946ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿ ಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

M. Rajanna

(ಎಂ.ರಾಜಣ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ - 2
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ
ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆ
ದೂರವಾಣಿ ಸಂಖ್ಯೆ: 2203 2240

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 946
ಸದಸ್ಯರ ಹೆಸರು : ಶ್ರೀ ರಾಜ್‌ಕುಮಾರ್ ಪಾಟೀಲ್
ಉತ್ತರಿಸುವ ದಿನಾಂಕ : 11.03.2020
ಉತ್ತರಿಸುವ ಸಚಿವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸ್ತುತ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ಅಂಗವಿಕಲರಿಗೆ ಮತ್ತು ಹಿರಿಯ ನಾಗರಿಕರಿಗೆ ನೀಡುತ್ತಿರುವ ಸೌಲಭ್ಯಗಳಾವುವು; | ಪ್ರಸ್ತುತ ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ಅಂಗವಿಕಲರಿಗೆ ಮತ್ತು ಹಿರಿಯ ನಾಗರಿಕರಿಗೆ ನೀಡುತ್ತಿರುವ ಸೌಲಭ್ಯಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಆ) | ಕಳೆದ ಐದು ವರ್ಷಗಳಲ್ಲಿ ಸದರಿ ಯೋಜನೆಗಳಲ್ಲಿ ಸೇಡಂ ಮತಕ್ಷೇತ್ರದಲ್ಲಿ ಎಷ್ಟು ಫಲಾನುಭವಿಗಳನ್ನು ಗುರುತಿಸಲಾಗಿದೆ; | ಕಳೆದ ಐದು ವರ್ಷಗಳಲ್ಲಿ ಸದರಿ ಯೋಜನೆಗಳಲ್ಲಿ ಸೇಡಂ ಮತಕ್ಷೇತ್ರದಲ್ಲಿ ಒಟ್ಟು 1252 ಫಲಾನುಭವಿಗಳನ್ನು ಗುರುತಿಸಲಾಗಿದೆ. |
| ಇ) | 2019-20 ಹಾಗೂ 2020-21ನೇ ಸಾಲಿನಲ್ಲಿ ಅಂಗವಿಕಲರಿಗೆ ಪ್ರತಿ ಮತಕ್ಷೇತ್ರದಲ್ಲಿ ಎಷ್ಟು ದ್ವಿಚಕ್ರ ಮತ್ತು ತ್ರಿಚಕ್ರ ವಾಹನಗಳನ್ನು ವಿತರಿಸಲು ಸರ್ಕಾರ ನಿರ್ಧರಿಸಲಾಗಿದೆ; | 2019-20ನೇ ಸಾಲಿನಲ್ಲಿ ಜಿಲ್ಲಾವಾರು ದೈಹಿಕ ವಿಕಲಚೇತನರ ಜನಸಂಖ್ಯೆಗನುಗುಣವಾಗಿ ಗುರಿನಿಗಧಿಪಡಿಸಲು ಕ್ರಮವಹಿಸಲಾಗುತ್ತಿದೆ.<br>2020-21ನೇ ಸಾಲಿನ ಆಯವ್ಯಯ ಲಭ್ಯತೆಗನುಗುಣವಾಗಿ ಕ್ರಮವಹಿಸಲಾಗುವುದು. |
| ಈ) | ಇವುಗಳಲ್ಲಿ ಸೇಡಂ ಮತಕ್ಷೇತ್ರಕ್ಕೆ ಎಷ್ಟು ವಾಹನಗಳನ್ನು ವಿತರಿಸಲು ನಿರ್ಧರಿಸಲಾಗಿದೆ? | 2019-20ನೇ ಸಾಲಿನಲ್ಲಿ ಯಂತ್ರಚಾಲಿತ ದ್ವಿಚಕ್ರವಾಹನಗಳನ್ನು ಜಿಲ್ಲಾವಾರು ದೈಹಿಕ ವಿಕಲಚೇತನರ ಸಂಖ್ಯೆಗನುಗುಣವಾಗಿ ಗುರಿನಿಗಧಿಪಡಿಸಿ ವಿತರಿಸಲು ಕ್ರಮವಹಿಸಲಾಗುತ್ತಿದ್ದು, 03 ತ್ರಿಚಕ್ರವಾಹನಗಳನ್ನು ಸಾಧನ ಸಲಕರಣೆ ಯೋಜನೆಯಡಿ ಸೇಡಂ ಮತಕ್ಷೇತ್ರಕ್ಕೆ ವಿತರಿಸಲು ನಿರ್ಧರಿಸಲಾಗಿದೆ. |

ಸಂಖ್ಯೆ: ಮಮಇ 54 ಪಿಹೆಚ್‌ಪಿ 2020

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ
ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖಾ ಸಚಿವರು

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜ್‌ಕುಮಾರ್ ಪಾಟೀಲ್ ಇವರ ಚುಕ್ಕೆಗುರುತಿಲ್ಲದ ಪ್ರಶ್ನೆಸಂಖ್ಯೆ:946ಕ್ಕೆ ಅನುಬಂಧ

## ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು

**ಇಲಾಖೆಯ ಕಾರ್ಯಕ್ರಮಗಳನ್ನು 3 ವಿಭಾಗಗಳಲ್ಲಿ ವರ್ಗೀಕರಿಸಲಾಗಿದೆ.**

1. ವಿಕಲಚೇತನರಿಗಾಗಿ ಅಭಿವೃದ್ಧಿ ಕಾರ್ಯಕ್ರಮಗಳು.
2. ಹಿರಿಯ ನಾಗರಿಕರಿಗಾಗಿ ಅಭಿವೃದ್ಧಿ ಕಾರ್ಯಕ್ರಮಗಳು.
3. ಸಾಮಾಜಿಕ ಭದ್ರತೆ ಮತ್ತು ರಕ್ಷಣೆ ಕಾರ್ಯಕ್ರಮಗಳು.

### ಇಲಾಖೆಯು ಅನುಷ್ಠಾನಗೊಳಿಸುತ್ತಿರುವ ವಿವಿಧ ಯೋಜನೆಗಳು:

**(ಎ) ಶೈಕ್ಷಣಿಕ:-**

**1) ಶ್ರವಣದೋಷವುಳ್ಳ ಮಕ್ಕಳಿಗಾಗಿ ವಸತಿಯುತ ಶಾಲೆಗಳು:**

ಇಲಾಖೆಯಡಿ ಶ್ರವಣದೋಷವುಳ್ಳ ಮಕ್ಕಳಿಗಾಗಿ ಬೆಂಗಳೂರು ನಗರ, ಮೈಸೂರು, ಕಲಬುರ್ಗಿ, ಬಳ್ಳಾರಿ, ಬೆಳಗಾವಿ ಜಿಲ್ಲೆಗಳಲ್ಲಿ 5 ಕಿವುಡು ಮಕ್ಕಳ ವಸತಿ ಶಾಲೆಗಳನ್ನು ನಡೆಸಲಾಗುತ್ತಿದೆ. ಈ ಶಾಲೆಗಳಲ್ಲಿ ಮಕ್ಕಳಿಗೆ ಉಚಿತ ವಸತಿ, ಊಟ ಮತ್ತು ಶಿಕ್ಷಣವನ್ನು ನೀಡಲಾಗುತ್ತಿದೆ. ಈ ಪೈಕಿ ಶ್ರವಣದೋಷವುಳ್ಳ ಹೆಣ್ಣು ಮಕ್ಕಳಿಗಾಗಿ ಬೆಳಗಾವಿಯಲ್ಲಿ ಪ್ರತ್ಯೇಕ ವಸತಿ ಶಾಲೆ ಇರುತ್ತದೆ.

**2. ಅಂಧ ಮಕ್ಕಳಿಗಾಗಿ ವಸತಿಯುತ ಶಾಲೆಗಳು:**

ಇಲಾಖೆಯಡಿ 4 ಅಂಧ ಮಕ್ಕಳ ವಸತಿ ಶಾಲೆಗಳು ಕಲಬುರ್ಗಿ, ಮೈಸೂರು, ದಾವಣಗೆರೆ ಹಾಗೂ ಹುಬ್ಬಳ್ಳಿಯಲ್ಲಿ ನಡೆಸಲಾಗುತ್ತಿದೆ. ಈ ಶಾಲೆಗಳಲ್ಲಿ ದೃಷ್ಟಿದೋಷವುಳ್ಳ ಮಕ್ಕಳಿಗೆ ಉಚಿತ ಊಟ, ವಸತಿ ಮತ್ತು ಶಿಕ್ಷಣವನ್ನು ನೀಡಲಾಗುತ್ತಿದೆ. ಈ ಪೈಕಿ ದೃಷ್ಟಿದೋಷವುಳ್ಳ ಹೆಣ್ಣು ಮಕ್ಕಳಿಗಾಗಿ ದಾವಣಗೆರೆಯಲ್ಲಿ ಪ್ರತ್ಯೇಕ ವಸತಿ ಶಾಲೆ ಇರುತ್ತದೆ.

**3. ಸರ್ಕಾರಿ ಅನುದಾನಿತ ಶಾಲೆಗಳು:**

(ಅ) 1982ರ ರಾಜ್ಯ ಅನುದಾನ ಸಂಹಿತೆಯಡಿ ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ 34 ವಿಶೇಷ ಶಾಲೆ/ ತರಬೇತಿ ಕೇಂದ್ರಗಳನ್ನು ದೈಹಿಕ, ಅಂಧ, ಶ್ರವಣದೋಷ ಹಾಗೂ ಬುದ್ಧಿಮಾಂದ್ಯ ಮಕ್ಕಳಿಗಾಗಿ ನಡೆಸಲಾಗುತ್ತಿದೆ. ರಾಜ್ಯ ಸರ್ಕಾರದಿಂದ ಅನುದಾನವನ್ನು ಜಿಲ್ಲಾ ಪಂಚಾಯತ್ ಮೂಲಕ ಬಿಡುಗಡೆ ಮಾಡಲಾಗುತ್ತಿದೆ.

(ಆ)**ಅಂಗವಿಕಲ ಮಕ್ಕಳ ಕೇಂದ್ರೀಕೃತ ವಿಶೇಷ ಶೈಕ್ಷಣಿಕ ಯೋಜನೆ:** ಈ ಯೋಜನೆಯಡಿ ಬುದ್ಧಿಮಾಂದ್ಯ (ಸೆರಬ್ರಲ್ ಪಾಲ್ಸಿ, ಆಟಿಸಂ), ದೃಷ್ಟಿದೋಷ, ಶ್ರವಣದೋಷವುಳ್ಳ ಮಕ್ಕಳಿಗಾಗಿ ವಸತಿಯುತ ಹಾಗೂ ವಸತಿರಹಿತ ಶಾಲೆಗಳು ಸೇರಿದಂತೆ ಒಟ್ಟು 133 ವಿಶೇಷ ಶಾಲೆಗಳು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಯುತ್ತಿವೆ. ಮಕ್ಕಳ ಸಂಖ್ಯೆಗೆ ಅನುಗುಣವಾಗಿ ಶ್ರವಣದೋಷವುಳ್ಳ ಹಾಗೂ ದೃಷ್ಟಿದೋಷವುಳ್ಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6200/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.5200/- ರಂತೆ ಹಾಗೂ ಬುದ್ಧಿಮಾಂದ್ಯ ಮಕ್ಕಳ ಮಕ್ಕಳ ವಸತಿಯುತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ.6800/- ರಂತೆ ಹಾಗೂ ವಸತಿರಹಿತ ಶಾಲೆಯಲ್ಲಿ ವ್ಯಾಸಂಗ ಮಾಡುತ್ತಿರುವ ಪ್ರತಿ ಮಗುವಿನ ನಿರ್ವಹಣೆಗೆ ಮಾಹೆಯಾನ ತಲಾ ರೂ. 6000/- ರಂತೆ ವರ್ಷದಲ್ಲಿ 10 ತಿಂಗಳ ಅವಧಿಗೆ ಅನುದಾನವನ್ನು ಮಂಜೂರು ಮಾಡಲಾಗುತ್ತಿದೆ. ಈ ಅನುದಾನದಲ್ಲಿ ಶಿಕ್ಷಕರ ಗೌರವಧನ, ಮಕ್ಕಳ ಆಹಾರ ವೆಚ್ಚ, ಕಟ್ಟಡದ ಬಾಡಿಗೆ ಹಾಗೂ ನಿರ್ವಹಣಾ ವೆಚ್ಚ, ಸಮವಸ್ತ್ರ, ವೈದ್ಯಕೀಯ ವೆಚ್ಚ ಹಾಗೂ ಸಾದಿಲ್ವಾರು ವೆಚ್ಚಗಳು ಒಳಗೊಂಡಿರುತ್ತವೆ.

4. ಅಂಗವಿಕಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ಪ್ರೋತ್ಸಾಹನ ಧನ:

ಈ ಯೋಜನೆಯಡಿ ಒಂದನೇ ತರಗತಿಯಿಂದ ಸ್ನಾತಕೋತ್ತರ ಪದವಿಯವರೆಗೆ ವ್ಯಾಸಂಗ ಮಾಡುತ್ತಿರುವ ಅರ್ಹ ವಿಕಲಚೇತನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಆಯಾ ಜಿಲ್ಲಾ ಕಛೇರಿಗಳ ಮೂಲಕ ಮಂಜೂರು ಮಾಡಲಾಗುತ್ತಿದೆ. 2001-02ನೇ ಸಾಲಿನಿಂದ ಈ ಯೋಜನೆಯ ಫಲಾನುಭವಿಗಳಿಗೆ ಆದಾಯ ಮಿತಿಯಿಂದ ವಿನಾಯಿತಿಗೊಳಿಸಲಾಗಿದೆ.

5. ಪ್ರತಿಭಾವಂತ ಅಂಗವಿಕಲ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ಯೋಜನೆ:

ಸಾರ್ವತ್ರಿಕ ಪರೀಕ್ಷೆಗಳಲ್ಲಿ ಶೇಕಡ 60 ಕ್ಕಿಂತಲೂ ಹೆಚ್ಚಿನ ಅಂಕಗಳನ್ನು ಪಡೆದ ಪ್ರತಿಭಾನ್ವಿತ ವಿಕಲಚೇತನ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ ನೀಡುವ ಯೋಜನೆ ಇದಾಗಿದೆ. ಈ ಯೋಜನೆಯನ್ನು 2001-02ನೇ ಸಾಲಿನಿಂದ ಬಿ.ಎಡ್, ಎಂ.ಎಡ್. ಮತ್ತು ಟಿ.ಸಿ.ಹೆಚ್. ವಿದ್ಯಾರ್ಥಿಗಳಿಗೂ ವಿಸ್ತರಿಸಲಾಗಿದೆ.

6. ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಶುಲ್ಕ ಮರುಪಾವತಿ:

ಉನ್ನತ ಶಿಕ್ಷಣ ಪಡೆಯುವ ವಿಕಲಚೇತನರಿಗೆ ಎಸ್.ಎಸ್.ಎಲ್.ಸಿ ನಂತರ ಉನ್ನತ ಶಿಕ್ಷಣ, ವೃತ್ತಿ ಶಿಕ್ಷಣ, ತಾಂತ್ರಿಕ ಶಿಕ್ಷಣ, ಸ್ನಾತಕೋತ್ತರ, ಔದ್ಯೋಗಿಕ ಶಿಕ್ಷಣಗಳಿಗೆ ನಿಯಮಾನುಸಾರ ಆಯ್ಕೆಯಾಗುವ ವಿದ್ಯಾರ್ಥಿಗಳಿಗೆ ಸರ್ಕಾರವು ನಿಗದಿಪಡಿಸಿರುವ ಪರೀಕ್ಷಾ ಶುಲ್ಕ, ಬೋಧನಾ ಶುಲ್ಕ, ಪ್ರಯೋಗಾಲಯ ಶುಲ್ಕ, ಕ್ರೀಡಾ ಶುಲ್ಕ ಹಾಗೂ ಗ್ರಂಥಾಲಯ ಶುಲ್ಕಗಳನ್ನು ಮರುಪಾವತಿಸುವ ಯೋಜನೆಯನ್ನು 2013-14ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಸೌಲಭ್ಯ ಪಡೆಯುವ ವಿದ್ಯಾರ್ಥಿಗಳಿಗೆ ಯಾವುದೇ ಆದಾಯಮಿತಿ ಇರುವುದಿಲ್ಲ. ವೈದ್ಯಕೀಯ ಮಂಡಳಿಯವರು ಶಿಫಾರಸ್ಸು ಮಾಡಿರುವ ವಿಕಲಚೇತನ ಅಭ್ಯರ್ಥಿಗಳು ಮಾತ್ರ ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾಗಿರುತ್ತಾರೆ.

7. ಬ್ರೈಲ್ ಮುದ್ರಣಾಲಯ:

ದೃಷ್ಟಿದೋಷವುಳ್ಳ ಮಕ್ಕಳಿಗೆ ಬೇಕಾಗುವ ಬ್ರೈಲ್ ಪುಸ್ತಕಗಳನ್ನು ಮುದ್ರಿಸಿ ಸಂಬಂಧಪಟ್ಟ ಅಂಧರ ಶಾಲೆಗಳಿಗೆ ಮೈಸೂರಿನಲ್ಲಿರುವ ಬ್ರೈಲ್ ಮುದ್ರಣಾಲಯದ ಮೂಲಕ ಉಚಿತವಾಗಿ ಸರಬರಾಜು ಮಾಡಲಾಗುತ್ತಿದೆ.

8. ವಿಶೇಷ ಶಿಕ್ಷಣ ತರಬೇತಿ ಕೇಂದ್ರ ಯೋಜನೆ:

ದೃಷ್ಟಿದೋಷವುಳ್ಳ ಹಾಗೂ ಶ್ರವಣದೋಷವುಳ್ಳ ವಿದ್ಯಾರ್ಥಿಗಳಿಗೆ ಬೋಧಿಸುವ ಶಿಕ್ಷಕರಿಗೆ ವಿಶೇಷ ಶಿಕ್ಷಣ ನೀಡಲು ತಲಾ ಒಂದರಂತೆ ವಿಶೇಷ ಶಿಕ್ಷಕರ ತರಬೇತಿ ಕೇಂದ್ರವನ್ನು ಮೈಸೂರಿನಲ್ಲಿ ನಡೆಸುತ್ತಿದ್ದು, ಪ್ರತಿ ವರ್ಷ ಪ್ರತಿ ಕೇಂದ್ರದಲ್ಲಿ 25 ಪ್ರಶಿಕ್ಷಣಾರ್ಥಿಗಳು ತರಬೇತಿ ಪಡೆಯುತ್ತಿದ್ದಾರೆ.

9. ಮಾನಸಿಕ ಅಸ್ವಸ್ಥ, ಸೆರಬ್ರಲ್ ಪಾಲ್ಸಿ, ಆಟಿಸಂ ಮಕ್ಕಳ ಹಗಲು ಯೋಗಕ್ಷೇಮ ಕೇಂದ್ರಗಳು:

ಸೆರಬ್ರಲ್ ಪಾಲ್ಸಿ, ಆಟಿಸಂ, ಮಾನಸಿಕ ಅಸ್ವಸ್ಥ ಹಾಗೂ ತೀವ್ರತರದ ಅಂಗವೈಕಲ್ಯತೆ ಹೊಂದಿರುವ ಮೂರರಿಂದ 25 ವರ್ಷದ ಒಳಗಿನ ಮಕ್ಕಳಿಗಾಗಿ 02 ಹಗಲು ಯೋಗಕ್ಷೇಮ ಕೇಂದ್ರಗಳನ್ನು ಬೆಂಗಳೂರು ನಗರ ಜಿಲ್ಲೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸುತ್ತಿದ್ದು, ಪ್ರತಿ ಕೇಂದ್ರದಲ್ಲಿ 25 ಮಕ್ಕಳನ್ನು ದಾಖಲಿಸಲು ಅವಕಾಶವಿದ್ದು, ಪ್ರತಿ ಮಗುವಿಗೆ ಮಾಸಿಕ ರೂ. 10,000/-ಗಳಂತೆ ವಾರ್ಷಿಕ 25.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ. ಪ್ರತಿ ವಿಭಾಗವಾರು ಹಗಲು ಯೋಗಕ್ಷೇಮ ಕೇಂದ್ರಗಳನ್ನು ಪ್ರಾರಂಭಿಸಲು ಕ್ರಮಕೈಗೊಳ್ಳಲಾಗುತ್ತಿದೆ.

(ಬಿ) ಉದ್ಯೋಗ ಮತ್ತು ತರಬೇತಿ:

1. ವಿಕಲಚೇತನರಿಗೆ ವೃತ್ತಿ ತರಬೇತಿ ಕೇಂದ್ರಗಳು:

ಈ ಯೋಜನೆಯ ಉದ್ದೇಶವು ವಿವಿಧ ರೀತಿಯ ವಿಕಲಚೇತನರಿಗೆ ವೃತ್ತಿ ತರಬೇತಿಯನ್ನು ನೀಡುವುದಾಗಿದೆ. 1982ರ ರಾಜ್ಯ ಅನುದಾನ ಸಂಹಿತೆಯಡಿ 5 ವೃತ್ತಿ ತರಬೇತಿ ಕೇಂದ್ರಗಳನ್ನು ರಾಜ್ಯ ಸಹಾಯಾನುದಾನದಡಿ ಬೆಂಗಳೂರು ಮತ್ತು ಮೈಸೂರಿನಲ್ಲಿ ನಡೆಸಲಾಗುತ್ತಿದೆ. ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ವಾಕ್‌ಶ್ರವಣ ಕೇಂದ್ರವನ್ನು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಡೆಸಲಾಗುತ್ತಿದೆ. ವೃತ್ತಿ ತರಬೇತಿ ಕೇಂದ್ರಗಳಲ್ಲಿ ವಿವಿಧ ರೀತಿಯ ವಿಕಲಚೇತನರಿಗೆ ಫಿಟ್ಟರ್, ಟರ್ನರ್, ಸರಳ ಇಂಜಿನಿಯರಿಂಗ್, ಬೆತ್ತ, ಹಗ್ಗ, ಚಾಪೆ ಹೆಣೆಯುವುದು ಹಾಗೂ ಪ್ಲಾಸ್ಟಿಕ್ ಮೌಲ್ಡಿಂಗ್ ತರಬೇತಿಯನ್ನು ನೀಡಲಾಗುತ್ತಿದೆ. ಪ್ರತಿ ತರಬೇತಿ ಕೇಂದ್ರದಲ್ಲಿ ವಾರ್ಷಿಕ 25 ಫಲಾನುಭವಿಗಳು ತರಬೇತಿ ಪಡೆಯುತ್ತಿದ್ದಾರೆ.

2. ಅಂಗವಿಕಲ ಪುರುಷ ಹಾಗೂ ಮಹಿಳೆಯರ ವಸತಿನಿಲಯ:

ಬೆಂಗಳೂರಿನಲ್ಲಿ ಮಹಿಳಾ ಮತ್ತು ಪುರುಷ ಅಂಗವಿಕಲ ನೌಕರರು ಮತ್ತು ಪ್ರಶಿಕ್ಷಣಾರ್ಥಿಗಳಿಗೆ ಪ್ರತ್ಯೇಕವಾದ ಒಂದೊಂದು ವಸತಿ ನಿಲಯವನ್ನು ನಡೆಸಲಾಗುತ್ತಿದೆ. ಪುರುಷರ ವಸತಿ ನಿಲಯದಲ್ಲಿ 50 ನಿವಾಸಿಗಳು ಹಾಗೂ ಮಹಿಳೆಯರ ವಸತಿ ನಿಲಯದಲ್ಲಿ 50 ನಿವಾಸಿಗಳನ್ನು ದಾಖಲಿಸಲು ಅವಕಾಶವಿದೆ.

3. ಆಧಾರ ಯೋಜನೆ :

ವಿಕಲಚೇತನರು ಸ್ವಯಂ ಉದ್ಯೋಗ ಕೈಗೊಂಡು ಜೀವನ ಸಾಗಿಸಲು ಅನುಕೂಲವಾಗುವಂತೆ ಆಧಾರ ಎಂಬ ಸಾಲ ಯೋಜನೆಯನ್ನು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳ ನೇತೃತ್ವದಲ್ಲಿ ಜಾರಿಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಪ್ರತಿ ಫಲಾನುಭವಿಗೆ ರೂ.15,000/-ಗಳ ಮೌಲ್ಯದ ಕಬ್ಬಿಣದ ಗೂಡಂಗಡಿಯನ್ನು ಉಚಿತವಾಗಿ ಹಾಗೂ ರೂ.20,000/-ಗಳ ನಿರ್ವಹಣಾ ಬಂಡವಾಳವನ್ನು ಬಡ್ಡಿ ರಹಿತ ಸಾಲದ ರೂಪದಲ್ಲಿ ನೀಡಲಾಗುತ್ತಿದೆ. 2018-19ನೇ ಸಾಲಿನ ಆಯವ್ಯಯ ಭಾಷಣದಲ್ಲಿ 'ಆಧಾರ' ಸ್ವಯಂ ಉದ್ಯೋಗ ಯೋಜನೆಯ ಘಟಕ ವೆಚ್ಚವನ್ನು ಈಗಿರುವ ರೂ.0.35ಲಕ್ಷಗಳಿಂದ ರೂ.1.00 ಲಕ್ಷ ರೂ.ಗಳಿಗೆ ಹೆಚ್ಚಿಸಿ, ಇದರಲ್ಲಿ ಶೇ.50ರಷ್ಟು ಬ್ಯಾಂಕ್ ಸಾಲ ಮತ್ತು ಶೇ.50ರಷ್ಟು ಸಹಾಯಧನ ಒದಗಿಸಲಾಗಿದೆ.

4. ಗ್ರಾಮೀಣ ಪುನರ್ವಸತಿ ಯೋಜನೆ:

ಈ ಯೋಜನೆಯನ್ನು ರಾಜ್ಯದ ಎಲ್ಲಾ 30 ಜಿಲ್ಲೆಗಳ 176 ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಪ್ರತಿ ಗ್ರಾಮ ಪಂಚಾಯತಿ ಅಡಿಯಲ್ಲಿ ಎಸ್.ಎಸ್.ಎಲ್.ಸಿ. ಉತ್ತೀರ್ಣ/ ಅನುತ್ತೀರ್ಣರಾದ ಸಮರ್ಥ ವಿಕಲಚೇತನರನ್ನು ಗ್ರಾಮೀಣ ಪುನರ್ವಸತಿ ಕಾರ್ಯಕರ್ತರೆಂದು ಹಾಗೂ ತಾಲ್ಲೂಕು ಪಂಚಾಯಿತಿ ಕಚೇರಿಯಲ್ಲಿ ಸ್ಥಳೀಯ ಸಮರ್ಥ ಪದವೀಧರ ವಿಕಲಚೇತನರೊಬ್ಬರನ್ನು ವಿವಿಧೋದ್ದೇಶ ಪುನರ್ವಸತಿ ಕಾರ್ಯಕರ್ತರೆಂದು, ಸ್ಥಳೀಯ ನಗರ ಪ್ರದೇಶಗಳಲ್ಲಿ ನಗರ ಪುನರ್ವಸತಿ ಕಾರ್ಯಕರ್ತರೆಂದು ಮತ್ತು ನಿರ್ದೇಶನಾಲಯದಲ್ಲಿ ರಾಜ್ಯ ಸಂಯೋಜಕರನ್ನು ಗೌರವಧನ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲಾಗಿದೆ. ಈ ಕಾರ್ಯಕರ್ತರ ಮೂಲಕ ವಿಕಲಚೇತನರಿಗೆ ಎಲ್ಲಾ ಸೇವಾ ಸೌಲಭ್ಯಗಳನ್ನು ಅವರಿರುವ ಸ್ಥಳಗಳಲ್ಲಿಯೇ ವಿಕಲಚೇತನರ ಮೂಲಕವೇ ತಲುಪಿಸಲಾಗುವುದು.

ಸರ್ಕಾರದ ಆದೇಶ ಸಂಖ್ಯೆ: ಮಮಇ/241/ಪಿಹೆಚ್‌ಪಿ/2019, ದಿನಾಂಕ:07-02-2020ರಂತೆ ಗ್ರಾಮೀಣ ಪುನರ್ವಸತಿ ಕಾರ್ಯಕರ್ತರು ಹಾಗೂ ನಗರ ಪುನರ್ವಸತಿ ಕಾರ್ಯಕರ್ತರುಗಳ ಗೌರವಧನವನ್ನು ರೂ.3000/-ಗಳಿಂದ ರೂ.6000/-ಗಳಿಗೆ ಹಾಗೂ ವಿವಿದ್ದೋದ್ದೇಶ ಪುನರ್ವಸತಿ ಕಾರ್ಯಕರ್ತರ ಗೌರವಧನವನ್ನು ರೂ.6000/-ಗಳಿಂದ ರೂ.12,000/-ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.

3. ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ವಸತಿ ನಿಲಯಗಳು:

ಅಂಗವಿಕಲ ಉದ್ಯೋಗಸ್ಥ ಮಹಿಳೆಯರಿಗಾಗಿ ಹಾಗೂ ವಿದ್ಯಾರ್ಥಿನಿ/ತರಬೇತಾರ್ಥಿಗಳಿಗೆ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಜಿಲ್ಲಾ ಕೇಂದ್ರಗಳಲ್ಲಿ 26 ಮಹಿಳಾ ವಸತಿ ನಿಲಯಗಳನ್ನು ನಡೆಸುತ್ತಿದ್ದು, ಸದರಿ ವಸತಿ ನಿಲಯದಲ್ಲಿ ಉದ್ಯೋಗಸ್ಥ ವಿಕಲಚೇತನ ಮಹಿಳೆಯರಿಗೆ ಹಾಗೂ ವಿದ್ಯಾರ್ಥಿನಿಯರಿಗೆ ವಸತಿ ಸೌಲಭ್ಯವನ್ನು ಕಲ್ಪಿಸಲಾಗಿದೆ. ಈ ವಸತಿ ನಿಲಯದಲ್ಲಿ ವಿದ್ಯಾರ್ಥಿನಿಯರು ಹಾಗೂ ತರಬೇತಿದಾರರಿಗೆ ಉಚಿತ ಊಟದ ವ್ಯವಸ್ಥೆಯಿದ್ದು, ಉದ್ಯೋಗಸ್ಥ ಮಹಿಳೆಯರು ಮಾಸಿಕ 800/-ಗಳನ್ನು ಪಾವತಿಸಬೇಕಾಗಿರುತ್ತದೆ.

ಸಿ. ಸಾಮಾಜಿಕ ಭದ್ರತಾ ಯೋಜನೆಗಳು:

1. ಸಮಾಜ ಸೇವಾ ಸಂಕೀರ್ಣ:

ನಿರ್ಗತಿಕ ಬುದ್ಧಿಮಾಂದ್ಯ ಪುರುಷರಿಗಾಗಿ ಸಮಾಜ ಸೇವಾ ಸಂಕೀರ್ಣ ಸಂಸ್ಥೆಯು ಬೆಂಗಳೂರಿನಲ್ಲಿ ಸರ್ಕಾರದ ವತಿಯಿಂದ ನಡೆಯುತ್ತಿದ್ದು, ಈ ಸಂಸ್ಥೆಯಲ್ಲಿ ಉಚಿತ ಊಟ, ವಸತಿ, ವೈದ್ಯಕೀಯ ಸೌಲಭ್ಯ ಸಂರಕ್ಷಣೆ ಒದಗಿಸಲಾಗುತ್ತಿದೆ.

2. ಮಂದಮತಿ ಮಹಿಳೆಯರ ಅನುಪಾಲನಾ ಗೃಹ:

18 ವರ್ಷ ಮೇಲ್ಪಟ್ಟ ನಿರ್ಗತಿಕ ಮಹಿಳಾ ಬುದ್ಧಿಮಾಂದ್ಯರಿಗೆ ಉಚಿತ ಊಟ, ವಸತಿ, ವೈದ್ಯಕೀಯ ಸೌಲಭ್ಯ ಮತ್ತು ಸಂರಕ್ಷಣೆ ಒದಗಿಸುವ ಉದ್ದೇಶದಿಂದ ಮಂದಮತಿ ಮಹಿಳೆಯರ ಅನುಪಾಲನಾ ಗೃಹಗಳನ್ನು ಬೆಂಗಳೂರು ನಗರ ಹಾಗೂ ಹುಬ್ಬಳ್ಳಿಯಲ್ಲಿ ಇಲಾಖಾವತಿಯಿಂದ ನಡೆಸಲಾಗುತ್ತಿದೆ.

3. ಮಾನಸಿಕ ಅಸ್ವಸ್ಥರಿಗೆ ಮಾನಸ ಕೇಂದ್ರಗಳು:

ಮಾನಸಿಕ ಅಸ್ವಸ್ಥರಿಗಾಗಿ ಬೆಂಗಳೂರು, ಬೆಳಗಾವಿ, ರಾಯಚೂರು, ಬಳ್ಳಾರಿ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಮಾನಸ ಕೇಂದ್ರಗಳನ್ನು ಪ್ರಾರಂಭಿಸಲು ಸರ್ಕಾರ ಮಂಜೂರಾತಿಯನ್ನು ನೀಡಿರುತ್ತದೆ. ರಾಜ್ಯ ಉಚ್ಚ ನ್ಯಾಯಾಲಯ ಮತ್ತು ಅಧೀನ ನ್ಯಾಯಾಲಯಗಳಿಂದ ಆದೇಶಿಸಲ್ಪಡುವ ಮಾನಸಿಕ ಅಸ್ವಸ್ಥರನ್ನು ಹಾಗೂ ರಸ್ತೆಗಳಲ್ಲಿ ಓಡಾಡುವ ನಿರ್ಗತಿಕ ಮಾನಸಿಕ ಅಸ್ವಸ್ಥರನ್ನು ಈ ಕೇಂದ್ರಗಳಲ್ಲಿ ನಿರ್ದಿಷ್ಟ ವೈದ್ಯಕೀಯ ಪ್ರಾಧಿಕಾರದ ಆದೇಶದ ಮೇರೆಗೆ ದಾಖಲಿಸಲು ಅವಕಾಶವಿರುತ್ತದೆ. ಈ ಕೇಂದ್ರಗಳಲ್ಲಿ ಫಲಾನುಭವಿಗಳಿಗೆ ಉಚಿತ ಊಟ, ವಸತಿ, ವೈದ್ಯಕೀಯ ಶುಶ್ರೂಷೆ, ವೈದ್ಯಕೀಯ ಸಲಹೆ(ಕೌನ್ಸಲಿಂಗ್) ಸೌಲಭ್ಯವನ್ನು ನೀಡಲಾಗುತ್ತಿದ್ದು, ಇವು ಅಲ್ಪಾವಧಿ ಕೇಂದ್ರಗಳಾಗಿರುತ್ತವೆ. ಪ್ರಸ್ತುತ ಬೆಂಗಳೂರು ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ಮಾತ್ರ ಮಾನಸ ಕೇಂದ್ರಗಳು ನಡೆಯುತ್ತಿವೆ.

4. ಬುದ್ಧಿಮಾಂದ್ಯ ಮಕ್ಕಳ ಪೋಷಕರಿಗೆ ವಿಮಾ ಯೋಜನೆ:

ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ: ತಾಯಿ: ಪೋಷಕರ ವಿಮಾ ಯೋಜನೆಯನ್ನು ಭಾರತೀಯ ಜೀವ ವಿಮಾ ನಿಗಮದ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಬುದ್ಧಿಮಾಂದ್ಯ ಮಕ್ಕಳ/ವ್ಯಕ್ತಿಗಳ ತಂದೆ:ತಾಯಿ: ಪೋಷಕರು ಮರಣ ಹೊಂದಿದ ನಂತರ ಬುದ್ಧಿಮಾಂದ್ಯ ಮಕ್ಕಳ ಜೀವನ ನಿರ್ವಹಣೆಗಾಗಿ ರೂ.20,000/-ಗಳ ಪರಿಹಾರ ಧನವನ್ನು ಕುಟುಂಬದ ನಾಮ ನಿರ್ದೇಶಿತ ಸದಸ್ಯರಿಗೆ ಪಾವತಿಸಲಾಗುತ್ತಿದೆ.

5. ವಿಕಲಚೇತನ ವ್ಯಕ್ತಿಗಳನ್ನು ಸಾಮಾನ್ಯರು ಮದುವೆಯಾದಲ್ಲಿ ಪ್ರೋತ್ಸಾಹ ಧನ ನೀಡುವ ಯೋಜನೆ:

ವಿಕಲಚೇತನ ಯುವಕ/ಯುವತಿಯರನ್ನು ವಿವಾಹವಾಗುವ ಸಾಮಾನ್ಯ ಯುವಕ/ ಯುವತಿಯರಿಗೆ ನಿರಂತರವಾಗಿ ಮಾಸಿಕ ಆದಾಯ ದೊರಕಿಸಲು ವಿಕಲಚೇತನ ವ್ಯಕ್ತಿಯ ಹೆಸರಿನಲ್ಲಿ ರೂ.50,000/-ಗಳನ್ನು ಮದುವೆಯಾದ ಸಾಮಾನ್ಯ ವ್ಯಕ್ತಿ ಹಾಗೂ ವಿಕಲಚೇತನರ ಜಂಟಿ ಹೆಸರಿನಲ್ಲಿ 05 ವರ್ಷದ ಅವಧಿಗೆ ಹೂಡಿಕೆಯ ರೂಪದಲ್ಲಿ ನೀಡಿ ಪ್ರೋತ್ಸಾಹ ನೀಡಲು ಹಾಗೂ ಅದರಿಂದ ಬರುವ ಬಡ್ಡಿ ಹಣವನ್ನು ಉಪಯೋಗಿಸುವುದು ಹಾಗೂ 05 ವರ್ಷಗಳ ನಂತರ ಠೇವಣಿ ಮೊತ್ತವನ್ನು ವಾಪಸ್ಸು ಪಡೆಯಬಹುದು ಅಥವಾ ಮುಂದುವರೆಸಲು ಅವಕಾಶವಿರುತ್ತದೆ.

...5

**6. ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಭತ್ಯೆ ಒದಗಿಸುವ ಯೋಜನೆ :**

ಅಂಧ ಮಹಿಳೆಯರು ಮಗುವಿಗೆ ಜನ್ಮ ನೀಡಿದಾಗ ಆ ಮಗುವನ್ನು ಇತರೆ ಸಾಮಾನ್ಯ ತಾಯಂದಿರಂತೆ ಆರೈಕೆ ಮಾಡುವುದು ಕಷ್ಟಕರವಾಗಿರುತ್ತದೆ. ಇಂತಹ ಅಂಧ ಮಹಿಳೆಯರಿಗೆ ಜನಿಸುವ ಮಕ್ಕಳಿಗೆ ಆರೈಕೆ ಮಾಡಲು ಆಯಾ ಸೇವೆ, ಆರೋಗ್ಯ ಪಾಲನೆ, ಪೌಷ್ಠಿಕ ಆಹಾರ, ಔಷಧೋಪಚಾರಗಳಿಗೆ ಮಾಹೆಯಾನ ರೂ.2000/– ದಂತೆ 2 ವರ್ಷಗಳ ಅವಧಿಗೆ ಸಹಾಯಧನವನ್ನು ನೀಡಲಾಗುತ್ತಿದೆ. ಈ ಸೌಲಭ್ಯವನ್ನು ಕನಿಷ್ಠ 2 ಮಕ್ಕಳವರೆಗೆ ಪಡೆಯಬಹುದಾಗಿದೆ.

**(ಡಿ) ಪುನರ್ವಸತಿ ಯೋಜನೆಗಳು:**

**1. ಅಂಗವಿಕಲರಿಗೆ ಸಾಧನ ಸಲಕರಣೆಗಳು :**

ಈ ಯೋಜನೆಯಡಿಯಲ್ಲಿ ಅಂಗವಿಕಲರಿಗೆ ಅವಶ್ಯವಾಗಿರುವ ಸಾಧನ ಸಲಕರಣೆಗಳನ್ನು ನೀಡ ಲಾಗುತ್ತಿದೆ. ಫಲಾನುಭವಿಯ ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ಗ್ರಾಮೀಣ ಪ್ರದೇಶದ ಫಲಾನುಭವಿಗಳಿಗೆ ರೂ.11,500/– ಮತ್ತು ನಗರ ಪ್ರದೇಶದ ಫಲಾನುಭವಿಗಳಿಗೆ ರೂ.24,000/– ನಿಗದಿಗೊಳಿಸಲಾಗಿದೆ.

ಅ. **ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ಯೋಜನೆ :**

ಎಸ್.ಎಸ್.ಎಲ್.ಸಿ ನಂತರ ವ್ಯಾಸಂಗ ಮಾಡುವ ದೃಷ್ಠಿದೋಷವುಳ್ಳ ವಿಕಲಚೇತನ ವಿದ್ಯಾರ್ಥಿಗಳು ಇತ್ತೀಚಿನ ತಂತ್ರಜ್ಞಾನ ಮತ್ತು ತಂತ್ರಾಂಶದ ಉಪಯೋಗದಿಂದ ಉನ್ನತ ಶಿಕ್ಷಣವನ್ನು ಪಡೆಯಲು ಅನುಕೂಲವಾಗುವಂತೆ ಮಾತನಾಡುವ (ಟಾಕಿಂಗ್) ಲ್ಯಾಪ್‌ಟಾಪ್‌ಗಳನ್ನು ಅರ್ಹ ಫಲಾನುಭವಿಗಳಿಗೆ ನೀಡಲಾಗುತ್ತಿದೆ.

ಆ. **ತೀವ್ರತರನಾದ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರವಾಹನ ಯೋಜನೆ :**

20 ರಿಂದ 60 ವರ್ಷದ ವಯೋಮಾನದ ತೀವ್ರತರವಾದ ದೈಹಿಕ ವಿಕಲಚೇತನರ ಕುಟುಂಬದ ವಾರ್ಷಿಕ ವರಮಾನ ರೂ.2.00 ಲಕ್ಷಗಳಿಗಿಂತ ಕಡಿಮೆ ಇರುವ ವಿಕಲಚೇತನರಿಗೆ ಅನುಕೂಲವಾಗುವಂತೆ ಜೀವಿತ ಕಾಲದಲ್ಲಿ ಒಂದು ಬಾರಿ ಯಂತ್ರಚಾಲಿತ ದ್ವಿಚಕ್ರ ವಾಹನವನ್ನು ಒದಗಿಸಲಾಗುತ್ತಿದೆ.

**2. ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರ ಯೋಜನೆ:–**

ವಿಕಲಚೇತನರನ್ನು ಗುರುತಿಸಿ ಅವರಿಗೆ ಶೈಕ್ಷಣಿಕ, ಉದ್ಯೋಗ ಮತ್ತು ತರಬೇತಿ, ಸಾಮಾಜಿಕ ಭದ್ರತೆ ಹಾಗೂ ಪುನರ್ವಸತಿ ಸೇವೆಗಳನ್ನು ಅವರ ಮನೆ ಬಾಗಿಲಿನಲ್ಲಿಯೇ ಒದಗಿಸಿ ಅವರ ಸರ್ವಾಂಗೀಣ ಪುನರ್ವಸತಿಯನ್ನು ಕಲ್ಪಿಸುವುದು ಈ ಯೋಜನೆಯ ಪ್ರಮುಖ ಉದ್ದೇಶವಾಗಿದೆ. ಈ ಯೋಜನೆಯಡಿ ವಿಕಲಚೇತನರಿಗೆ ಅಗತ್ಯವಿರುವ ವೈದ್ಯಕೀಯ ಸೇವೆ, ವೃತ್ತಿ ಚಿಕಿತ್ಸೆ, ವಿವಿಧ ರೀತಿಯ ಸಾಧನ ಸಲಕರಣೆಗಳನ್ನು ಕೇಂದ್ರಗಳಲ್ಲಿ ತಯಾರಿಸಿ ಒದಗಿಸಲಾಗುವುದು.

**3. ಅಂಗವಿಕಲತೆಯನ್ನು ನಿವಾರಿಸುವ ಶಸ್ತ್ರಚಿಕಿತ್ಸೆಗಾಗಿ ವೈದ್ಯಕೀಯ ಪರಿಹಾರ ನಿಧಿ ಯೋಜನೆ:–**

ಅಂಗವಿಕಲ ವ್ಯಕ್ತಿಗಳಿಗೆ ಅಂಗವಿಕಲತೆಯನ್ನು ನಿವಾರಿಸಲು ಶಸ್ತ್ರ ಚಿಕಿತ್ಸೆಗಾಗಿ ಸರ್ಕಾರಿ ಆಸ್ಪತ್ರೆ, ಸಂಜಯಗಾಂಧಿ ಆಸ್ಪತ್ರೆಗಳಲ್ಲಿ ಹಾಗೂ ಸುಸಜ್ಜಿತ ಖಾಸಗಿ ಆಸ್ಪತ್ರೆಗಳಲ್ಲಿ ಅಂಗವಿಕಲತೆ ನಿವಾರಣಾ ಶಸ್ತ್ರ ಚಿಕಿತ್ಸೆಗಾಗಿ ರೂ.1.00 ಲಕ್ಷಗಳವರೆಗೆ ಸಹಾಯ ಧನವನ್ನು ಮಂಜೂರು ಮಾಡಲಾಗುತ್ತಿದೆ.

**4. ಸಾಧನೆ ಮತ್ತು ಪ್ರತಿಭೆ ಯೋಜನೆ:**

ವಿಕಲಚೇತನ ಕ್ರೀಡಾಪಟುಗಳಿಗೆ ಪ್ರೋತ್ಸಾಹ ನೀಡಿ ಧನಸಹಾಯ ನೀಡಲು "ಸಾಧನೆ" ಎಂಬ ಯೋಜನೆಯು ಜಾರಿಯಲ್ಲಿದ್ದು, ಕ್ರೀಡೆಗಳಲ್ಲಿ ವಿಶೇಷ ಸಾಧನೆಗೈದ ವಿಕಲಚೇತನರಿಗೆ ರೂ.50,000/–ಗಳ ಧನ ಸಹಾಯವನ್ನು ನೀಡಲಾಗುತ್ತಿದೆ.

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:380ಕ್ಕೆ ಅನುಬಂಧ-3

## List of Old Age Home under Central Grants

| Sl. No | Name of the District where project implemented | Name of the District where project implemented | Project Running Address |
|---|---|---|---|
| 1 | Bangalore | Sri Shathashrunga Vidya Samsthe, Kamakshipalya, Bangalore-79 | Sri Snehadhama Vruddashrama, Shirdi Sai Gram, Metipalya, Sondekoppa Road, Tavarakere, Bangalore South, Karnataka State |
| 2 | Bangalore | Bangalore | old age Home at No.113/77, 12th Cross, Srigandha Nagar, Behind Veda Garment, Hegganahalli, Peenya 2nd Stage, Bangalore, Karnataka State |
| 3 | Bangalore | Vidyaranya Education and Development Society, Bangalore | Hosabelaku Home for the Aged at Mandur, Virgo Nagar(Via), Bangalore East, Bangalore, Karnataka State |
| 4 | Bangalore Rural | Sarvodaya Service Society, Vijayapura, Devanahalli Taluk, Bangalore Rural Dist., | Bapuji Home for the Aged at Sangameshwara Dharma Samsthe, Vijayapura, Devanahalli Taluk, Bangalore Rural Dist., Karnataka State |
| 5 | Belgaum | Shri Mallikarjun Jan-Seva Society, Plot No.341, CTS No.10360, Sector No.2, Sneha Apartment, G-2, Shivbasav Nagar, Belgaum-590 010, Karnataka State. | Old Age Home at No.48/E, Shibasav Marg, Sahu Nagar, Belgaum Taluk & Dist.,Karnataka State |
| 6 | Bellary | Adarsha Education Society, Bellary | Adharsha Old Age Home at No.428/06, Sanganakallu Post, Bellary Taluk and District, Kartnataka State |
| 7 | Bidar | Dr.B.R.Ambedkar Culture and Welfare Society,No.18-11-29 House of Don SBH Colony KEB Road, BidarDist., | Mahatma Jyothiba Phule Old Age Home, OLD AGE HOME AT PARADISE COMPLEX, MAILOOR CROSS ROAD, BIDAR |
| 8 | Bidar | Shivleela Women's Welfare Association, Mangalpet, Bidar Dist., | Mother Theresa Old Age Home, H.No.36/B, Eden Colony, Bidar, Bidar Dist., Karnatka State |
| 9 | Bidar | Sri Jai Santhoshi Mata Multipurpose Womens Management Society(R), Bidar | Sri Someshwar Old Age home, Near Subhash Chowk, Near Satya Sai Public School, Balki-585328, Bidar |
| 10 | Vijayapura | Dr. B.R.Ambedkar Culture & Welfare Society, Bidar | Swamy Vivkekanand Old Age Home, Bheema Shankar Nilaya, Ibrahampur, Bijapur, Karnataka State |
| 11 | Chikka ballapur | Sri Vishnu Education Soceity(R), Chokkanahalli, Yenigadale Post, Chintamani Taluk, Chikkaballapur Dist. | Sri Vishnu Old Age Home, N.Srinivasaiah Building, Diamond Talkies Road, Chintamani, Chikkaballapur Dist., Karnataka State |
| 12 | Chikka ballapur | Sri Swamy Sarva Dharma Sharanalaya Trust, Sultanpet, Nandi Post, Chikkaballapur Dist. | Sri Sai Dwarakamayee Old Age Home, Sultanpet, Nandi(Post), Chikkaballapur Dist., Karnataka State |
| 13 | Chikka magalore | Annapurna Assocation, Harihar, Davangere Dist., | Annapurna Old Age Home at 60 ft Road, Bulf Factory, Gowri Kalve, Chikkamagalur Dist., Karnataka State |

| | | | |
|---|---|---|---|
| 14 | Chikka magalore | Chickmagalur Rotary Inner Wheel Trust (R) Chikkamagalore. | Old Age Home at Kadrimidri, Mugthihalli Post, Chikmagalore-577133 |
| 15 | Chitradurga | Sri Sadguru Kabeeranandaswamy Vidya Peetha(R), Kabeerananda Nagar, Chitradurga | Sri Sadguru Kabeerananda Swamy Old Age Home, Kabeerananda Nagar, Chitradurga-577 501, Karnataka State |
| 16 | Chitradurga | Rajayogi Siddartha Education Society(R) Turuvanur, Chitradurga Taluk, Chitradurga | Vishranthi Old Age Home at Turuvanur, Chitradurga, Chitradurga Dist., Karnataka State. |
| 17 | Davangere | Gayathri Grameena Vidya Samsthe, Mayakonda, Davangere. | Old Age Home at Near Inspection Bunglow, Mayakonda, Davangere Taluk & Dist., Karnataka State |
| 18 | Davangere | Sri Shakthi Association, Guttur Colony, Harihar, Davangere Dist., | Sri Shakthi Old Age Home at Guttur Colony, Harihar-577601, Davangere Dist., Karnataka State |
| 19 | Davangere | Sri Maitri Association, Sugar Factory Road, Doddabathi, Davangere | Sri Maitri Old Age Home, at Sugar Factory Road, Doddabathi, Davangere Dist., Karnataka State |
| 20 | Dharwad | Sneha Education and Development Society, Navanagar, Hubli Dist., | Vivekananda Old Age Home at No.251, Gamagatti Road, Shivananda Nagar, Hubli, Dharwad Dist., Karnataka State |
| 21 | Gadag | Surabee Mahila Mandali(R), S.Nijalingappa Badavane, Davangere | Surabee Old Age Home, Fakirappa S. Hanumara Building, Near Bus Stand, Hulikoti Taluk, Gadag Dist., Karnataka State |
| 22 | Gulbarga | Mehaboob Subhani Education Trust, Gulbarga | Old age Home at New Jeelanabad, Gulbarga |
| 23 | Hassan | Vidyaranya Education and Development Society, Bangalore. | Old Age Home at Ward No.2, Chennigaraya Extension, Near Telephone Exchange, Channarayapatna, Hassan Dist., Karnataka State |
| 24 | Haveri | Lalitha Academy, Near Popular Rice Mill, Shimoga Dist., | Lalitha Home for the Aged at Ranebennur Taluk, Haveri Dist, Karnataka State |
| 25 | Kodagu | Sri Shakthi Association, Guttur Colony, Harihar, Davangere Dist., | Sri Shakthi Old Age Home at Brahmana Vailley, Opp.Omkareshwara Temple, Madikeri, Kodagu Dist., Karnataka State |
| 26 | Kolar | Ramana Maharshi Trust for the Disabled Persons, Bangarpet, Kolar Dist . | Sri Ramana Abhayashram Old Age Home at Parandahalli Road, Robertsonpet, KGF, Bangarpet Taluk, Kolar Dist., Karnataka State |
| 27 | Koppal | Sri Maitri Association, Sugar Factory Road, Doddabathi, Davangere | Sri Maitri Old Age Home, Plot No.34/12A, Anjaneya Badavane, Mahalaxmi Nagar, Gram Panchayath, Koppal Dist., Karnataka State |
| 28 | Mandya | Jnana Sindhru Education and Cultural Society, Kaval Bhyrasandra New Extn., Bangalore | Jnana Sindhu Old Age Home at Shankarappa Layout, Halahalli, Mandy-571 401, Mandya Dist., Karnataka State |
| 29 | Mandya | Poornima Vidya Samsthe(R), Arakere, Sri Rangapatna Taluk, Mandya Dist., | Kasturaba Gandhi Old Age Home at Arekere, Near Bus Stand, Sri Rangapatna Taluk, Mandya Dist., Karnataka State |
| 30 | Shimoga | Lalitha Academy, Near Popular Rice Mill, Shimoga Dist., | Lalitha Home for the Aged, Navule, Shimoga, Shimoga Dist., Karnataka State |

22



| | | | |
|---|---|---|---|
| 31 | Shimoga | Sri Kalikamba Association, Holalkere, Chitradurga Dist., | Sri Kalikamba Old Age Home at Swamy Vivekananda Badavane, Shimoga Dist., Karnataka State |
| 32 | Shimoga | Sri Kalikamba Association, Holalkere, Chitradurga Dist., | Kalikamba Multi Facility Care Centre for Older Widowed Women at Navule, Shimoga, Shimoga Dist., Karnataka State |
| 33 | Tumkur | Sri Sawamy Sarva Dharma Sharanalaya Trust, Sultanpet, Nandi Post, Chikkaballapur Dist | Shakshi Ganapathi Old Age Home, Siddapura Gate, Sira Road, Madhugiri Taluk, Tumkur Dist.,Karnataka State |
| 34 | Tumkur | Sri Sawamy Sarva Dharma Sharanalaya Trust, Sultanpet, Nandi Post, Chikkaballapur Dist | Sri Sai Dwarakamayee Old Age Home, Sai Nagar, Kanivenahally Post, Pavagada Taluk, Tumkur Dist., Karnataka State |
| 35 | Tumkur | Rural organisation Social and Educational Society(R) Bangalore | Shir Shirdi Sai Old Age Home at Katagondana Halli, Midegesi Hobli, Madhugiri Taluk, Tumkur Dist., |
| 36 | Uttar Kannada | Shri Mallikarjun Jan-Seva Society, Sy.No.48/1E, Shahu Nagar, Belgavi-590010 | Sri Raghavendra Old Age Home at H.No.31 Kalamma Nagar, A/P/ Tal: Yellapur, Uttar Kannada |
| 37 | Yadgir | Veerendra Patil Vividodesha Seva Sangh(R), Talikoti Road, Ashraya Colony, Hunsagi, Yadgir | Old age home at Talikoti Road, Ashraya Colony, Hunsagi, Yadgir |
| 38 | Yadgiri | Reach Rural Development Service & Society ®, H.No.12-20, CCI Kurkunta, Near Factory, Sedam taluk, Gulbraga. | Old Age Home at H.No.203, Guttipet, Shahapur Taluk, Shahapur Dist, Yadgiri. |
| 39 | Davangere | Lalitha Academy (R), Honnaly Road, Near Popular Rice Mill, Shimoga Dist., | Lalitha Multi Facility Care Centre for Older Widowed Women, D.No.866/6, Saraswathi Nagar, B-Block, Davangere, Karnataka State |
| 40 | Raichur | Shivleela Womens Welfare Association, Bidar, | Mluti facility care center for older widowed women at Gillesugur Camp, Raichur Taluk and District. |
| 41 | Bangalore | Nightingales Medical Trust, No.337, 2nd Cross, 1st Block, R.T.Nagar, Bangalore-560 032 | Regional Resource & Training Centre at No.40, Lakshmi Complex, K.R.Fort Road, Opp.Vani Vilas Hospital, Bangalore -560 002, Karnataka State |
| 42 | Kolar | Sri Ramana Maharshi Trust for the Disabled Persons, KGF, Bangarpet, Kolar Dist., | Sri Ramana Mobile Medicare Unit at Parandahalli Main Road, Viar KGF, Bangarpet Taluk, Kolar Dist., Karnataka State. |
| 43 | Davangere | Gayathri Grameena Vidya Samsthe(R), Mayakonda Davangere | Demential Day Care Center K.B Extention Door No 438/1, 2nd cross, Near gullamma temple, Davangere |
| 44 | Kolar | Ramana Maharshi Trust for the Disabled(R) Parandahalli, Kolar | Physiotherapy Clinic Parandahalli Main Road, Viar KGF, Bangarpet Taluk, Kolar Dist., Karnataka State. |

***

ಕರ್ನಾಟಕ ಸರ್ಕಾರ

ಸಂಖ್ಯೆ: ಗ್ರಾಅಪ/247/ಗ್ರಾಪಂಅ/2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:10-03-2020.

120
CIS
11/3/20

ಇಂದ,

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಪಂ.ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ,
**ಬೆಂಗಳೂರು.**

ಇವರಿಗೆ,

ಕಾರ್ಯದರ್ಶಿಗಳು,
ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆ ಸದಸ್ಯರಾದ ಮಾನ್ಯ ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1306 ಕ್ಕೆ ಉತ್ತರ.

**ಉಲ್ಲೇಕ** ಕಾರ್ಯದರ್ಶಿಗಳು, ಕರ್ನಾಟಕ ವಿಧಾನ ಸಭೆ ರವರ ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1306/2020 ದಿನಾಂಕ: 29-02-2020.

*****

ಕರ್ನಾಟಕ ವಿಧಾನ ಸಭೆ ಸದಸ್ಯರಾದ ಮಾನ್ಯ ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1306 ಕ್ಕೆ ತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

B. Naveenkumar 10/3/2020.
(ಬಿ. ನವೀನ್ ಕುಮಾರ್)
ಉಪನಿರ್ದೇಶಕರು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, (ಗ್ರಾ.ಪಂ.)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪ್ರತಿ:
ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ) ಗ್ರಾಅಪ ಇಲಾಖೆ. (5 ಪ್ರತಿಗಳು)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1306

ಸದಸ್ಯರ ಹೆಸರು : ಶ್ರೀ ರಾಜೇಶ್ ನಾಯಕ್ ಯು. (ಬಂಟ್ವಾಳ)

ಉತ್ತರಿಸುವ ದಿನಾಂಕ : 11-03-2020

ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ತಾಲ್ಲೂಕು ಪಂಚಾಯತಿಯಿಂದ ಅನುಮೋದನೆಗೊಂಡು ನಿವೇಶನಗಳನ್ನು ಮರುವಿಂಗಡನೆ ಮಾಡಿ ಅನುಮೋದನೆ ನೀಡುವ ಪ್ರಾಧಿಕಾರ ಯಾವುದು; ಈ ಬಗ್ಗೆ ಸ್ಪಷ್ಟ ಆದೇಶ ಇಲ್ಲದೇ ಹಲವಾರು ಕಡತಗಳು ತಾಲ್ಲೂಕು ಪಂಚಾಯತಿಗಳಲ್ಲಿ ವಿಲೇ ಆಗದೇ ಬಾಕಿ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇಂತಹ ಪ್ರಕರಣಗಳ ಸಂಖ್ಯೆ ಎಷ್ಟು; ಈ ರೀತಿಯ ಪ್ರಕರಣಗಳಿಗೆ ಸರ್ಕಾರ ಕೈಗೊಂಡ ಕ್ರಮಗಳೇನು (ವಿವರ ನೀಡುವುದು) | ಸರ್ಕಾರವು ದಿನಾಂಕ:29-02-2020 ರಂದು ಹೊರಡಿಸಿರುವ ಸುತ್ತೋಲೆ ಸಂಖ್ಯೆ: ಗ್ರಾಅಪ 729 ಗ್ರಾಪಂಅ 2019 ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿ ಏಕನಿವೇಶನ/ಬಹುನಿವೇಶನ ವಸತಿ ವಿನ್ಯಾಸ ಅನುಮೋದನೆಯನ್ನು ತಾಲ್ಲೂಕು ಪಂಚಾಯತಿಗಳು ನೀಡುತ್ತಿರುವುದರಿಂದ ತಾಲ್ಲೂಕು ಪಂಚಾಯಿತಿಗಳು ನಿವೇಶನಗಳನ್ನು ಮರು ವಿಂಗಡಣೆ ಮಾಡಬಹುದಾಗಿದೆ.<br><br>ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕು ಪಂಚಾಯತಿಯಲ್ಲಿ ಕಾರ್ಯನಿರ್ವಾಹಕ ಅಧಿಕಾರಿಯು ನಿವೇಶನಗಳನ್ನು ಮರು ವಿಂಗಡನೆ ಮಾಡದಂತಹ 3 ಪ್ರಕರಣಗಳು ಬಾಕಿ ಇರುತ್ತವೆ.<br><br>ತಾಲ್ಲೂಕು ಪಂಚಾಯತಿಗಳು ನಿವೇಶನಗಳನ್ನು ಮರುವಿಂಗಡನೆ ಮಾಡಿ ಅನುಮೋದನೆ ನೀಡಲು ಈಗಾಗಲೇ ಎಲ್ಲಾ ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ತಿಳಿಸಲಾಗಿದೆ. |
| ಆ | ಇ-ಸ್ವತ್ತು ಯೋಜನೆಯಡಿ ನಮೂನೆ 9-11ಎ ಸಂಬಂಧಿಸಿದ ಏಕ ವಿನ್ಯಾಸ ಮತ್ತು ಬಹು ವಿನ್ಯಾಸ ನಿವೇಶನಗಳಿಗೆ ವಿನ್ಯಾಸ ಅನುಮೋದನೆ ನೀಡುವ ಸಕ್ಷಮ ಪ್ರಾಧಿಕಾರಗಳು ಯಾವುವು? (ಸರ್ಕಾರ ಹೊರಡಿಸಿದ ಆದೇಶದ ಪ್ರತಿಯನ್ನು ನೀಡುವುದು) | ಸರ್ಕಾರವು ದಿನಾಂಕ:29-02-2020 ರಂದು ಹೊರಡಿಸಿರುವ ಸುತ್ತೋಲೆ ಸಂಖ್ಯೆ: ಗ್ರಾಅಪ 729 ಗ್ರಾಪಂಅ 2019 ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿ ಒಂದು ಎಕರೆಗಿಂತ ಕಡಿಮೆ ಇರುವ ಏಕ ನಿವೇಶನ / ಬಹುನಿವೇಶನ ವಸತಿ ವಿನ್ಯಾಸ ಅನುಮೋದನೆಯನ್ನು ತಾಲ್ಲೂಕು ಪಂಚಾಯತಿಗಳು ಮಾಡಬಹುದು. ಸುತ್ತೋಲೆ ಪ್ರತಿಯನ್ನು ಅನುಬಂಧ-1 ರಲ್ಲಿ ನೀಡಿದೆ.<br><br>ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಜಮೀನಿನ ವಿಸ್ತೀರ್ಣವು 1000 ಚದರ ಮೀಟರ್ (0.10 ಹೆಕ್ಟೇರ್) ಅಥವಾ ಕಡಿಮೆ ಇದ್ದಲ್ಲಿ ಏಕ ನಿವೇಶನ ವಸತಿ / ವಸತಿಯೇತರಗಾಗಿ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಯನ್ನು ಗ್ರಾಮ ಪಂಚಾಯತಿಗಳು ಮಾಡಬಹುದಾಗಿದೆ. ದಿನಾಂಕ: 19-03-2015 ರ ಸುತ್ತೋಲೆ ಪ್ರತಿಯನ್ನು ಅನುಬಂಧ-2 ರಲ್ಲಿ ನೀಡಿದೆ. |

| | | |
|---|---|---|
| ಇ | ಏಕ ನಿವೇಶನ ಮತ್ತು ಬಹು ನಿವೇಶನಗಳಿಗೆ ಸರ್ಕಾರ ನಿಗದಿಪಡಿಸಿದ ಸಂಪರ್ಕ ರಸ್ತೆಯ ಅಗಲವೆಷ್ಟು; ಈ ಬಗ್ಗೆ ಸರ್ಕಾರ ಹೊರಡಿಸಿದ ಆದೇಶದ ಪ್ರತಿ ಒದಗಿಸುವುದು? | ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿ ಒಂದು ಎಕರೆಗಿಂತ ಕಮ್ಮಿ ಇರುವ ಏಕ ನಿವೇಶನ / ಬಹುನಿವೇಶನ ವಸತಿ ವಿನ್ಯಾಸದಲ್ಲಿ ಬಡಾವಣೆಯ ಆಂತರಿಕ ರಸ್ತೆಯ ಅಗಲವು ಕನಿಷ್ಠ 9 ಮೀಟರ್ ಇರಬೇಕು. ಆದರೆ ಆರ್ಥಿಕವಾಗಿ ದುರ್ಬಲವಾದ ವರ್ಗದವರಿಗಾಗಿ ರಚಿಸಲಾಗುವ 6*9 ಮೀಟರ್ ನಿವೇಶನಗಳಿಗೆ ಕನಿಷ್ಠ 6 ಮೀಟರ್ ಅಗಲ ರಸ್ತೆ ಇರಬೇಕಾಗಿರುತ್ತದೆ. ದಿನಾಂಕ:11-11-2014 ರ ಸರ್ಕಾರದ ಕೈಪಿಡಿಯ ಪ್ರತಿಯನ್ನು ಅನುಬಂಧ-3 ರಲ್ಲಿ ನೀಡಿದೆ.<br><br>ದಕ್ಷಿಣ ಕನ್ನಡ, ಉಡುಪಿ, ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಜಮೀನಿನ ವಿಸ್ತೀರ್ಣವು 1000 ಚದರ ಮೀಟರ್ (0.10 ಹೆಕ್ಟೇರ್ಸ್) ಅಥವಾ ಕಡಿಮೆ ಇದ್ದಲ್ಲಿ ಮಾತ್ರ ಸದರಿ ವಿನ್ಯಾಸದಲ್ಲಿ ಅಗತ್ಯ ರಸ್ತೆ ಜಾಲದ ಪ್ರದೇಶವನ್ನು ಅಳವಡಿಸಬೇಕಾಗಿರುತ್ತದೆ. ದಿನಾಂಕ:19-03-2015 ರ ಸುತ್ತೋಲೆ ಪ್ರತಿಯನ್ನು ಅನುಬಂಧ-2 ರಲ್ಲಿ ನೀಡಿದೆ. |

ಸಂ. ಗ್ರಾಅಪ 247 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1306 ಕ್ಕೆ ಉತ್ತರ-1

**ಕರ್ನಾಟಕ ಸರ್ಕಾರ**

ಸಂಖ್ಯೆ: ಗ್ರಾಅಪ 729 ಗ್ರಾಪಂಅ 2019

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ:29-02-2020

**ಸುತ್ತೋಲೆ**

**ವಿಷಯ:** ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ ಅನುಸರಿಸಬೇಕಾದ ವಿಧಾನಗಳ ಬಗ್ಗೆ ಸ್ಪಷ್ಟೀಕರಣ ನೀಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರ ಸಂಖ್ಯೆ: ಗ್ರಾಅಪ 86 ಗ್ರಾಪಂಅ 2014 ದಿನಾಂಕ: 11-11-2014.
2. ಸರ್ಕಾರದ ಪತ್ರ ಸಂಖ್ಯೆ: ಗ್ರಾಅಪ 826 ಗ್ರಾಪಂಅ 2017, ದಿನಾಂಕ:21-04-2018.

* * * *

ಸರ್ಕಾರವು ಹೊರಡಿಸಿರುವ ಉಲ್ಲೇಖಿತ ಪತ್ರಗಳಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ ತಾಲ್ಲೂಕು ಪಂಚಾಯತಿಗಳು ಮತ್ತು ಗ್ರಾಮ ಪಂಚಾಯತಿಗಳು ಅನುಸರಿಸಬೇಕಾದ ವಿಧಾನಗಳ ಬಗ್ಗೆ ಕೈಪಿಡಿಯ ಮೂಲಕ ಸವಿವರವಾಗಿ ತಿಳಿಸಲಾಗಿದೆ.

ಇತ್ತೀಚೆಗೆ ಸದರಿ ಮಾರ್ಗಸೂಚಿಗಳ ಅನುಷ್ಠಾನ ಮಾಡುವುದರಿಂದ ಕೆಲವು ಸಂದೇಹಗಳಿದ್ದು, ಪರಿಹರಿಸಲು ಜನಪ್ರತಿನಿಧಿಗಳಿಂದ ಬೇಡಿಕೆ ಬಂದಿರುತ್ತದೆ. ಇವುಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಸ್ಪಷ್ಟೀಕರಣ ನೀಡಿದೆ.

| ಕ್ರಸಂ | ದಿನಾಂಕ: 11-11-2014 ರ ಸರ್ಕಾರದ ಪತ್ರದ ಸಂಗಡ ಲಗತ್ತಿಸಿರುವ ಕೈಪಿಡಿಯಲ್ಲಿನ ಮಾರ್ಗಸೂಚಿ | ಸ್ಪಷ್ಟೀಕರಣ |
|---|---|---|
| 1 | ಒಂದು ಎಕರೆಗಿಂತ ಕಡಿಮೆ ಇರುವ ಏಕನಿವೇಶನ / ಬಹುನಿವೇಶನ ವಸತಿ ವಿನ್ಯಾಸ ಅನುಮೋದನೆ ನೀಡುವ ಬಗ್ಗೆ | ಒಂದು ಎಕರೆಗಿಂತ ಕಡಿಮೆ ಇರುವ ಏಕನಿವೇಶನ / ಬಹುನಿವೇಶನ ವಸತಿ ವಿನ್ಯಾಸ ಅನುಮೋದನೆಯನ್ನು ತಾಲ್ಲೂಕು ಪಂಚಾಯತಿಗಳು ಮಾಡಬಹುದು. |
| 2 | ಕಂಡಿಕೆ:7.4 ಮತ್ತು 11.4 ರಲ್ಲಿ ಒಂದು ಎಕರೆಗಿಂತ ಕಡಿಮೆ ಇರುವ ಹಾಗೂ ವಿಸ್ತೀರ್ಣದ ಮಿತಿಯಿಲ್ಲದೆ ಬಹುನಿವೇಶನ ವಸತಿ ವಿನ್ಯಾಸ / ವಸತಿಯೇತರ ವಿನ್ಯಾಸದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ಪೂರ್ವಾನುಮತಿಯಿಲ್ಲದೆ ವಿನ್ಯಾಸದಲ್ಲಿ ಯಾವುದೇ ಬದಲಾವಣೆ ಮಾಡಬಾರದು. | ಒಂದು ಎಕರೆಗಿಂತ ಕಡಿಮೆ ಇರುವ ಏಕನಿವೇಶನ / ಬಹುನಿವೇಶನ ವಸತಿ ವಿನ್ಯಾಸ ಅನುಮೋದನೆಯನ್ನು ತಾಲ್ಲೂಕು ಪಂಚಾಯತಿಗಳು ನೀಡುತ್ತಿರುವುದರಿಂದ ತಾಲ್ಲೂಕು ಪಂಚಾಯತಿಗಳು ವಿನ್ಯಾಸದಲ್ಲಿ ಬದಲಾವಣೆ ಮಾಡಬಹುದು. |
| 3 | ದಿನಾಂಕ:21-04-2018 ರ ಸರ್ಕಾರದ ಪತ್ರದಲ್ಲಿ ಒಂದು ಎಕರೆಗಿಂತ ಕಡಿಮೆ ಇರುವ ಪ್ರದೇಶದಲ್ಲಿ ವಿನ್ಯಾಸ ನಕ್ಷೆ ಅನುಮೋದನೆಯನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಕಾರ್ಯಪಾಲಕ ಅಭಿಯಂತರರು ಅಥವಾ ನೋಂದಾಯಿತ ಖಾಸಗಿ ವಾಸ್ತು ಶಿಲ್ಪಿಗಳು ಅನುಮೋದನೆ ನೀಡುವ ಬಗ್ಗೆ. | ಜಿಲ್ಲಾ ಪಂಚಾಯಿತಿ ವತಿಯಿಂದ ಗುರುತಿಸಲ್ಪಟ್ಟ (ಎಂಪ್ಯಾನಲ್) ನಿವೃತ್ತ ಅಥವಾ ನುರಿತ ನಗರ ಯೋಜಕರ ಸೇವೆಯನ್ನು ಪಡೆದು ತಾಲ್ಲೂಕು ಪಂಚಾಯತಿಗಳು ವಿನ್ಯಾಸ ನಕ್ಷೆ ಅನುಮೋದನೆ ಮಾಡಬಹುದಾಗಿದೆ. |

ಈ ಮೇಲ್ಕಂಡಂತೆ ಸುತ್ತೋಲೆಯ ಅಂಶಗಳನ್ನು ಪರಿಪಾಲಿಸಬೇಕೆಂದು ಈ ಮೂಲಕ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಎಲ್ಲಾ ತಾಲ್ಲೂಕು ಪಂಚಾಯತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಗ್ರಾಮ ಪಂಚಾಯಿತಿಗಳ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳಿಗೆ ಸೂಚಿಸಿದೆ.

B. Naveenkumar 29/2/2020.
(ಬಿ. ನವೀನ್ ಕುಮಾರ್)
ಉಪನಿರ್ದೇಶಕರು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, (ಗ್ರಾ.ಪಂ.)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಗೆ:
1) ಎಲ್ಲಾ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್‌ಗಳು.
2) ಎಲ್ಲಾ ಕಾರ್ಯನಿರ್ವಾಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯತ್‌ಗಳು.
3) ಎಲ್ಲಾ ಗ್ರಾಮ ಪಂಚಾಯತಿಗಳ ಅಧ್ಯಕ್ಷರು ಮತ್ತು ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು.

ಪ್ರತಿ:
1) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2) ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಂ.ರಾಜ್) ರವರ ಆಪ್ತ ಕಾರ್ಯದರ್ಶಿ.
3) ಸಂಪಾದಕರು, ಕರ್ನಾಟಕ ವಿಕಾಸ ಪತ್ರಿಕೆ/ವೆಬ್‌ಸೈಟ್, ಗ್ರಾ.ಅ ಮತ್ತು ಪಂ.ರಾಜ್ ಇಲಾಖೆ.
4) ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿ.

ವಿಧಾನ ಸಭೆಯಲ್ಲಿ ಚರ್ಚೆ ಸುಯಿತ್ತಿಲ್ಲದ ಪ್ರಶ್ನೆ ಸಂಖ್ಯೆ: 1306 ಕ್ಕೆ ಅನುಬಂಧ-

**ಕರ್ನಾಟಕ ಸರ್ಕಾರ**

ಸಂಖ್ಯೆ: ಗ್ರಾಅಪ 86 ಗ್ರಾಪಂಅ 2014

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 11-11-2014.

ಇವರಿಂದ:

ಸರ್ಕಾರದ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ,
ಬೆಂಗಳೂರು.

ಇವರಿಗೆ:

ಎಲ್ಲಾ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು,
ಜಿಲ್ಲಾ ಪಂಚಾಯತಿ,

ಮಾನ್ಯರೆ,

ವಿಷಯ: ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ ಅನುಸರಿಸಬೇಕಾದ ವಿಧಾನಗಳ ಬಗ್ಗೆ.

ಉಲ್ಲೇಖ: ಸರ್ಕಾರದ ಸುತ್ತೋಲೆ ಸಂಖ್ಯೆ- ಗ್ರಾಅಪ 83 ಗ್ರಾಪಂಅ 2013 (ಭಾ-6) ದಿನಾಂಕ:03-02-2013.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖದ ಕಡೆಗೆ ತಮ್ಮ ಗಮನ ಸೆಳೆಯುತ್ತಾ, ಉಲ್ಲೇಖಿತ ಸರ್ಕಾರದ ಸುತ್ತೋಲೆಯಲ್ಲಿ ಸ್ಥಳೀಯ ಯೋಜನಾ ಪ್ರಾಧಿಕಾರದ ಹೊರಗಡೆ ಇರುವ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ (ಲೇಔಟ್ ಪ್ಲಾನ್) ಅನುಮೋದನೆ ನೀಡಲು ತಾಲ್ಲೂಕು ಹಾಗೂ ಗ್ರಾಮ ಪಂಚಾಯತಿಗಳು ಅನುಸರಿಸಬೇಕಾದ ವಿಧಿವಿಧಾನಗಳ ಬಗ್ಗೆ ಪ್ರತ್ಯೇಕ ಮಾರ್ಗಸೂಚಿಯನ್ನು ಗ್ರಾಮೀಣಾಭಿವೃದ್ಧಿ ಮತ್ತು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ಹೊರಡಿಸಲಾಗುವುದಾಗಿ ತಿಳಿಸಲಾಗಿತ್ತು.

ಪ್ರಸ್ತುತ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ ಅನುಸರಿಸಬೇಕಾದ ವಿಧಾನಗಳ ಬಗ್ಗೆ ಕೈಪಿಡಿಯನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿದೆ. ಸದರಿ ಕೈಪಿಡಿಯ ಅನುಸಾರ ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ ಕ್ರಮ ವಹಿಸಲು ಎಲ್ಲಾ ತಾಲ್ಲೂಕು ಪಂಚಾಯತಿಗಳು ಮತ್ತು ಗ್ರಾಮ ಪಂಚಾಯತಿಗಳಿಗೆ ನಿರ್ದೇಶನ ನೀಡುವಂತೆ ತಮಗೆ ತಿಳಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

11/11/14

(ಕೆ. ಯಾಲಕ್ಕಿಗೌಡ)
ನಿರ್ದೇಶಕರು (ಪಂ.ರಾಜ್) ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

ಪ್ರತಿಯನ್ನು ಮಾಹಿತಿ ಮತ್ತು ಅಗತ್ಯ ಕ್ರಮಕ್ಕಾಗಿ:

1) ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು.
2) ಎಲ್ಲಾ ತಾಲ್ಲೂಕು ಪಂಚಾಯತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು.
3) ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿ ಅಧ್ಯಕ್ಷರು/ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು (ಆಯಾ ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿಯ ಮುಖಾಂತರ)

# ಸ್ಥಳೀಯ ಯೋಜನಾ ಪ್ರದೇಶದ ಹೊರಗಡೆ ಭೂ ಪರಿವರ್ತಿತ ಜಮೀನುಗಳಲ್ಲಿ ಬಡಾವಣೆಗಾಗಿ ವಿನ್ಯಾಸ ಅನುಮೋದನೆ ಮಾಡಲು ಅನುಸರಿಸಬೇಕಾದ ವಿಧಾನಗಳ ಬಗ್ಗೆ

## ಕೈಪಿಡಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್
ಸಚಿವಾಲಯ,
ಕರ್ನಾಟಕ ಸರ್ಕಾರ ಮತ್ತು
ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ
ಬಹುಮಹಡಿಗಳ ಕಟ್ಟಡ
ಬೆಂಗಳೂರು–560 001

## ಪರಿವಿಡಿ (CONTENTS) ಭಾಗ-1

ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಒಂದು ಎಕರೆಗಿಂತ ಕಡಿಮೆ ಇರುವ ಪ್ರದೇಶ ಮತ್ತು ಏಕನಿವೇಶನ ವಸತಿ / ವಸತಿಯೇತರಗಾಗಿ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ ಅನುಸರಿಸಬೇಕಾದ ವಿಧಾನಗಳು :


| ಕ್ರ ಸಂ | ವಿವರಗಳು | ಪುಟ ಸಂಖ್ಯೆ |
|---|---|---|
| 1. | ಸ್ಥಳೀಯ ಸಂಸ್ಥೆಯು ವಿನ್ಯಾಸ ಅನುಮೋದನೆಗಾಗಿ ಸ್ವೀಕರಿಸಲಾದ ಅರ್ಜಿಗಳ ಪರಿಶೀಲನೆ ಹಾಗೂ ಕ್ರಮ ಕೈಗೊಳ್ಳುವ ಬಗ್ಗೆ. | 1–2 |


## ಪರಿವಿಡಿ (CONTENTS) ಭಾಗ-2


| ಕ್ರ ಸಂ | ವಿವರಗಳು | ಪುಟ ಸಂಖ್ಯೆ |
|---|---|---|
| 1. | ಸ್ಥಳೀಯ ಸಂಸ್ಥೆಯು ವಿನ್ಯಾಸ ಅನುಮೋದನೆಗಾಗಿ ಸ್ವೀಕರಿಸಲಾದ ಅರ್ಜಿಗಳ ಪರಿಶೀಲನೆ ಹಾಗೂ ಕ್ರಮ ಕೈಗೊಳ್ಳುವ ಬಗ್ಗೆ. | 3–4 |
| 2. | ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯು ಸ್ಥಳೀಯ ಸಂಸ್ಥೆಯಿಂದ ಸ್ವೀಕರಿಸಲಾದ ಅರ್ಜಿಗಳ ಬಗ್ಗೆ ಪರಿಶೀಲನೆ ಹಾಗೂ ಕ್ರಮ ಕೈಗೊಳ್ಳುವ ಬಗ್ಗೆ ಅನುಸರಿಸಬೇಕಾದ ವಿಧಾನಗಳು | 5–6 |
| 3. | ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ತಾಂತ್ರಿಕ ಅನುಮೋದನೆ ಪಡೆದ ನಂತರ ವಿನ್ಯಾಸವನ್ನು ಬಿಡುಗಡೆ ಮಾಡುವ ಬಗ್ಗೆ ಮತ್ತು ಅಭಿವೃದ್ಧಿಪಡಿಸಲು ಸ್ಥಳೀಯ ಸಂಸ್ಥೆಯು ಅನುಸರಿಸಬೇಕಾದ ಮುಂದಿನ ಕ್ರಮಗಳು | 7–8 |
| 4. | ನಿವೇಶನಗಳ ವಿವರಣೆ | 9 |
| 5. | ವಿಸ್ತೀರ್ಣ ಮಿತಿ ಇಲ್ಲದೇ ಬಹು ನಿವೇಶನ ವಸತಿ ವಿನ್ಯಾಸಗಳಲ್ಲಿರಬೇಕಾದ ಅಂಶಗಳು | 10 |
| 6. | ಬಹು ನಿವೇಶನ ವಸತಿ ವಿನ್ಯಾಸ ಅನುಮೋದನೆ ಸಮಯದಲ್ಲಿ ವಿಧಿಸಬೇಕಾದ ಷರತ್ತುಗಳು | 11–12 |
| 7. | ವಿಸ್ತೀರ್ಣ ಮಿತಿಯಿಲ್ಲದೇ ಏಕ ನಿವೇಶನದ ವಸತಿ ವಿನ್ಯಾಸಗಳಲ್ಲಿರಬೇಕಾದ ಅಂಶಗಳು | 13 |
| 8. | ವಿಸ್ತೀರ್ಣದ ಮಿತಿಯಿಲ್ಲದೇ ಏಕ ನಿವೇಶನದ ವಸತಿ ವಿನ್ಯಾಸಗಳ ಅನುಮೋದನೆ ಸಮಯದಲ್ಲಿ ವಿಧಿಸಬೇಕಾದ ಷರತ್ತುಗಳು | 14 |
| 9. | ವಿಸ್ತೀರ್ಣ ಮಿತಿ ಇಲ್ಲದೇ ಬಹು ನಿವೇಶನ ವಸತಿಯೇತರ ವಿನ್ಯಾಸಗಳಲ್ಲಿರಬೇಕಾದ ಅಂಶಗಳು | 15–16 |
| 10 | ವಿಸ್ತೀರ್ಣದ ಮಿತಿಯಿಲ್ಲದೇ ಬಹು ನಿವೇಶನದ ವಸತಿಯೇತರ ವಿನ್ಯಾಸಗಳ | 17 |

| | | |
|---|---|---|
| | ಅನುಮೋದನೆ ಸಮಯದಲ್ಲಿ ವಿಧಿಸಬೇಕಾದ ಷರತ್ತುಗಳು | |
| 11. | ವಿಸ್ತೀರ್ಣ ಮಿತಿಯಿಲ್ಲದೇ ವಸತಿಯೇತರ ಏಕ ನಿವೇಶನ ವಿನ್ಯಾಸ ಅನುಮೋದಿಸುವಾಗ ಅನುಸರಿಸಬೇಕಾದ ಕ್ರಮಗಳು. | 18–20 |
| 12. | ವಿಸ್ತೀರ್ಣ ಮಿತಿಯಿಲ್ಲದೇ ವಸತಿಯೇತರ ಏಕ ನಿವೇಶನ ವಿನ್ಯಾಸಗಳ ಅನುಮೋದನೆ ಸಮಯದಲ್ಲಿ ವಿಧಿಸಬೇಕಾದ ಷರತ್ತುಗಳು | 21 |
| 13. | ಸ್ಥಳೀಯ ಸಂಸ್ಥೆಗೆ ಅರ್ಜಿದಾರರು/ ಅಭಿವೃದ್ಧಿದಾರರು ಸಲ್ಲಿಸಬೇಕಾದ ವಿನ್ಯಾಸ ಅನುಮೋದನೆಗೆ ಸಂಬಂಧಿಸಿದ ಅರ್ಜಿ ನಮೂನೆಯ ಮಾದರಿ (ನಮೂನೆ–1) | 22–24 |
| 14. | ಸ್ಥಳೀಯ ಸಂಸ್ಥೆಯು ಅರ್ಜಿಯನ್ನು ಸಂಬಂಧಪಟ್ಟ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿಗೆ ಕಳುಹಿಸುವ ಬಗ್ಗೆ. (ನಮೂನೆ–2 ಮತ್ತು 2ಎ) | 25–26 |
| 15. | ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯು ದಾಖಲಾತಿಗಳಿಗಾಗಿ ಅರ್ಜಿದಾರರಿಗೆ/ಅಭಿವೃದ್ಧಿದಾರರಿಗೆ ನೀಡಬೇಕಾದ ಪತ್ರದ ನಮೂನೆ (ನಮೂನೆ– 3) | 27–28 |
| 16. | ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯು ಸ್ಥಳೀಯ ಸಂಸ್ಥೆಯಿಂದ ಸ್ವೀಕರಿಸಲಾದ ವಿನ್ಯಾಸ ನಕ್ಷೆ ಅನುಮೋದನೆ ಪ್ರಸ್ತಾವನೆಗಳ ಬಗ್ಗೆ ಪರಿಶೀಲಿಸಬೇಕಾದ ಅಂಶಗಳ ಪರಿಶೀಲನಾ ಪಟ್ಟಿ (ನಮೂನೆ– 4) | 29–34 |
| 17. | ನೊಂದಾಯಿತ ಪರಿತ್ಯಜನಾ ಪತ್ರದ ಮಾದರಿ (ನಮೂನೆ– 5) | 35–36 |
| 18. | ಸ್ಥಳೀಯ ಸಂಸ್ಥೆಯು ಅರ್ಜಿದಾರರಿಗೆ/ ಅಭಿವೃದ್ಧಿದಾರರಿಗೆ ನೀಡಬೇಕಾದ ಮಂಜೂರಾತಿ ಆದೇಶದ ಮಾದರಿ (ನಮೂನೆ– 6) | 37–41 |
| 19. | ಅರ್ಜಿದಾರರು/ ಅಭಿವೃದ್ಧಿದಾರರು ಸ್ಥಳೀಯ ಸಂಸ್ಥೆಗೆ ಸಲ್ಲಿಸಬೇಕಾದ ಪ್ರಮಾಣ ಪತ್ರದ ಮಾದರಿ. (ಅನುಬಂಧ– 1) | 42 |
| 20. | ಅರ್ಜಿದಾರರು / ಅಭಿವೃದ್ಧಿದಾರರು ಸ್ಥಳೀಯ ಸಂಸ್ಥೆಗೆ ಶೇ.40 ರಷ್ಟು ನಿವೇಶನಗಳನ್ನು ಹಸ್ತಾಂತರಿಸಿರುವ ಬಗ್ಗೆ ನೀಡಬೇಕಾದ ಮುಚ್ಚಳಿಕೆ ಪತ್ರದ ಮಾದರಿ. (ಅನುಬಂಧ– 2) | 43–34 |
| 21 | ಸ್ಥಳೀಯ ಸಂಸ್ಥೆಯು ಅರ್ಜಿದಾರರು/ ಅಭಿವೃದ್ಧಿದಾರರು ಇವರಿಗೆ ಶೇ.60 ರಷ್ಟು ನಿವೇಶನಗಳನ್ನು ನೊಂದಾವಣೆಗಾಗಿ ಬಿಡುಗಡೆ ಮಾಡುವ ಬಗ್ಗೆ ನೀಡಬೇಕಾದ ಪ್ರಮಾಣ ಪತ್ರದ ಮಾದರಿ. (ಅನುಬಂಧ– 3) | 45 |
| 22 | ಸ್ಥಳೀಯ ಸಂಸ್ಥೆಯು ಅರ್ಜಿದಾರರು/ ಅಭಿವೃದ್ಧಿದಾರರು ಇವರಿಗೆ ಶೇ.40 ರಷ್ಟು ನಿವೇಶನಗಳನ್ನು ನೊಂದಾವಣೆಗಾಗಿ ಬಿಡುಗಡೆ ಮಾಡುವ ಬಗ್ಗೆ ನೀಡಬೇಕಾದ ಪ್ರಮಾಣ ಪತ್ರದ ಮಾದರಿ. (ಅನುಬಂಧ– 4) | 46 |

## ಭಾಗ-1

## ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಒಂದು ಎಕರೆಗಿಂತ ಕಡಿಮೆ ಇರುವ ಪ್ರದೇಶ ಮತ್ತು ಏಕನಿವೇಶನ ವಸತಿ / ವಸತಿಯೇತರಗಾಗಿ ಭೂ ಪರಿವರ್ತಿತ ಜಮೀನುಗಳಲ್ಲಿನ ವಿನ್ಯಾಸ ಅನುಮೋದನೆಗಾಗಿ ಅನುಸರಿಸಬೇಕಾದ ವಿಧಾನಗಳು :

1. ಸ್ಥಳೀಯ ಸಂಸ್ಥೆಯು ವಿನ್ಯಾಸ ಅನುಮೋದನೆಗಾಗಿ ಸ್ವೀಕರಿಸಲಾದ ಅರ್ಜಿಗಳ ಪರಿಶೀಲನೆ ಹಾಗೂ ಕ್ರಮ ಕೈಗೊಳ್ಳುವ ಬಗ್ಗೆ.

1.1 ವಿನ್ಯಾಸ ಅನುಮೋದನೆಗಾಗಿ ನಿಗಧಿಪಡಿಸಿರುವ ಅರ್ಜಿಯನ್ನು, ಅರ್ಜಿದಾರರು/ ಅಭಿವೃದ್ಧಿದಾರರು ಸಂಬಂಧಿಸಿದ ಸ್ಥಳೀಯ ಸಂಸ್ಥೆಗೆ (ಗ್ರಾಮ ಪಂಚಾಯತ್) ಪ್ರಶ್ನಿತ ಜಮೀನಿನ ವಿಸ್ತೀರ್ಣಕ್ಕನುಗುಣವಾಗಿ ಪರಿಮಾಣಕ್ಕೆ ತಯಾರಿಸಿದ 5 ವಿನ್ಯಾಸಗಳ ಪ್ರತಿಗಳು ಸೇರಿದಂತೆ ನಿಗಧಿತ ಅರ್ಜಿ ನಮೂನೆ-I ರಲ್ಲಿ ಸೂಚಿಸಿರುವ ಅಗತ್ಯ ದಾಖಲಾತಿಗಳನ್ನು ಲಗತ್ತಿಸಿ ಅರ್ಜಿಯನ್ನು ಭರ್ತಿಮಾಡಿ ~~ಅರ್ಜಿಯ ಜೊತೆಗೆ ಅನುಬಂಧ-I ರಲ್ಲಿರುವಂತೆ ನೋಟರಿ ದೃಢೀಕೃತ ಪ್ರಮಾಣ ಪತ್ರದೊಂದಿಗೆ~~ ಸಲ್ಲಿಸತಕ್ಕದ್ದು.

1.2 ಸ್ಥಳೀಯ ಸಂಸ್ಥೆಯು ವಿನ್ಯಾಸ ಅನುಮೋದನೆ ಕೋರಿ ಸ್ವೀಕರಿಸಿದ ಅರ್ಜಿಯನ್ನು ಹಾಗೂ ಲಗತ್ತಿಸಿದ ದಾಖಲಾತಿಗಳನ್ನು ಈ ಕೆಳಕಂಡ ಅಂಶಗಳ ಬಗ್ಗೆ ಪರಿಶೀಲಿಸಿಕೊಳ್ಳತಕ್ಕದ್ದು.

1.2.1. ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಕಂದಾಯ ಇಲಾಖೆಯು ಹೊರಡಿಸಿದ ಭೂ ಪರಿವರ್ತನೆ ಆದೇಶದ ಪ್ರತಿ ಇದೆಯೇ ? – ಹೌದು / ಇಲ್ಲ

1.2.2. ಜಮೀನಿನ ಮಾಲೀಕತ್ವದ ಬಗ್ಗೆ (ಕ್ರಯ ಪತ್ರ, ವಿಭಾಗ ಪತ್ರ, ವಂಶಪಾರಂಪರ ಪತ್ರ ಇತ್ಯಾದಿ) ಸರಿಯಾದ ದಾಖಲಾತಿ ಕುರಿತು ಪರಿಶೀಲಿಸಿ, ತೃಪ್ತಿದಾಯಕವಾಗಿದೆಯೇ? – ಹೌದು / ಇಲ್ಲ

1.2.3. ಪ್ರಶ್ನಿತ ಅರ್ಜಿ 1 ಎಕರೆಗಿಂತ ಕಡಿಮೆ ಇರುವ ಪ್ರದೇಶ ಮತ್ತು ಏಕ ನಿವೇಶನ ವಸತಿ / ವಸತಿಯೇತರ ಉದ್ದೇಶಕ್ಕಾಗಿ ನೀಡಲಾಗಿದೆಯೇ ? – ಹೌದು / ಇಲ್ಲ

1.2.4. ಪ್ರಶ್ನಿತ ಜಮೀನು, ಕರ್ನಾಟಕ ಗೃಹಮಂಡಳಿಯಲ್ಲಿ ಅಥವಾ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (KIADB) ಸೇರಿದಂತೆ ಯಾವುದಾದರೂ ಇತರೆ ಸಂಸ್ಥೆಗಳಿಂದ ಭೂ ಸ್ವಾಧೀನದ ಪ್ರಕ್ರಿಯೆಯಲ್ಲಿ ಒಳಗೊಂಡಿದೆಯೇ? – ಒಳಗೊಂಡಿದೆ / ಒಳಗೊಂಡಿಲ್ಲ.

1.2.5. ಜಮೀನಿನ ಮಾಲೀಕರು ಅಥವಾ ಅಧಿಕೃತ ಅಧಿಕಾರ ಹೊಂದಿದ ವ್ಯಕ್ತಿಯ ಮಾತ್ರ ವಿನ್ಯಾಸ ಅನುಮೋದನೆ ಅರ್ಜಿಯನ್ನು ಸಲ್ಲಿಸಿದ್ದಾರೆಯೇ? – ಹೌದು / ಇಲ್ಲ

1.2.6. ಪ್ರಶ್ನಿತ ಜಮೀನು ಋಣಭಾರ ರಹಿತವಾಗಿದೆಯೇ? – ಹೌದು / ಇಲ್ಲ

1.2.7. ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಅಧಿಕೃತ ಅಟ್ಲಾಸ್ ಅಥವಾ ಇ-ನಕಾಶೆ (ಇ-Sketch) ಮೂಲ ಪ್ರತಿಯಲ್ಲಿ ಅಳತೆಗಳನ್ನು ಅಳವಡಿಸಿ ಲಗತ್ತಿಸಿದೆಯೇ? ಹೌದು / ಇಲ್ಲ

1.2.8. ಕಂದಾಯ ದಾಖಲಾತಿಯಲ್ಲಿ ನಮೂದಿತವಾದ 'ಅ' ಖರಾಬು ಅಥವಾ 'ಬಿ' ಖರಾಬು ಜಾಗವನ್ನು ಅಟ್ಲಾಸ್‌ನಲ್ಲಿ – ನಿಖರವಾಗಿ ಅಳತೆಗಳೊಂದಿಗೆ ಅಳವಡಿಸಿ ಗುರ್ತಿಸಿದೆಯೇ? – ಹೌದು / ಇಲ್ಲ

1.2.9. ಪ್ರಶ್ನಿತ ಜಮೀನು, ಸೂಕ್ತವಾದ ಸಾರ್ವಜನಿಕ ರಸ್ತೆ ಸಂಪರ್ಕ ಹೊಂದಿರತಕ್ಕದ್ದು. (NH/SH/MDR/ ODR/Village road ಅಥವಾ ಅನುಮೋದಿತ ವಿನ್ಯಾಸದಲ್ಲಿನ ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಿದ ರಸ್ತೆ ಅಥವಾ ಅಭಿವೃದ್ಧಿ ಹೊಂದಿದ ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಿದ ಒಳ ರಸ್ತೆ) – ಹೌದು / ಇಲ್ಲ.

1.2.10. ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಗ್ರಾಮ ನಕ್ಷೆಯಲ್ಲಿ ಉದ್ದೇಶಿತ ವಿನ್ಯಾಸದ ಪ್ರದೇಶವನ್ನು ಗುರ್ತಿಸಿ ಲಗತ್ತಿಸಿದೆಯೇ? – ಹೌದು / ಇಲ್ಲ.

1.2.11. ಪ್ರಶ್ನಿತ ಜಮೀನನ್ನು ಹಾಲಿ ಇರುವ ಆಯಾಮಗಳೊಂದಿಗೆ ಅಳತೆಗೆ ನಕ್ಷೆಯನ್ನು ತಯಾರಿಸಿ ಹಾಲಿ ಇರುವ Physical Features ಅಂದರೆ ನಾಲೆ, ಹಳ್ಳ, ವಿದ್ಯುತ್ ತಂತಿ, ಹಾಲಿ ರಸ್ತೆ ಮತ್ತು ವರ್ಗೀಕರಣ ಹಾಗೂ ಇತರೆ ಮಾಹಿತಿಗಳನ್ನು ಒಳಗೊಂಡ ಸ್ಥಳ ನಕ್ಷೆಯನ್ನು ಸಲ್ಲಿಸಿದೆಯೇ? – ಹೌದು / ಇಲ್ಲ.

1.2.12 ಪ್ರಶ್ನಿತ ಜಮೀನಿನ ಸುತ್ತಮುತ್ತ ಇರಬಹುದಾದ ಸ್ಮಶಾನ/ ಕ್ವಾರಿ/ ನೀರು ಸಂಗ್ರಹಿತ ತಗ್ಗು ಪ್ರದೇಶ/ ಅಸಮರ್ಪಕ ಚರಂಡಿ/ ಸ್ವಾಭಾವಿಕ ನೀರಿನ ಹರಿವು ಅಥವಾ ಅನಾರೋಗ್ಯಕರ ವಾತಾವರಣಗಳಿಂದಾಗಿ ಉದ್ದೇಶಿತ ವಿನ್ಯಾಸ ಅಭಿವೃದ್ಧಿಪಡಿಸಲು ಯಾವುದೇ ತೊಂದರೆಯಾಗವುದೇ? – ಹೌದು / ಇಲ್ಲ.

1.2.13. ಉದ್ದೇಶಿತ ವಿನ್ಯಾಸದ ಪ್ರಸ್ತಾವನೆಯ ರಸ್ತೆ ಜಾಲವು/ ಪ್ರಶ್ನಿತ ಜಮೀನಿಗೆ ಲಗತ್ತಾದಂತೆ ಹಾಲಿ ಇರುವ ಬಡಾವಣೆ ಅಥವ ಅನುಮೋದಿತ ವಿನ್ಯಾಸಗಳ ರಸ್ತೆ ಜಾಗವನ್ನು ಯಥಾವತ್ತಾಗಿ ಮುಂದುವರೆಸುವಂತೆ ಇರುವುದೇ? – ಹೌದು / ಇಲ್ಲ.

1.3 ಮೇಲ್ಕಂಡಂತೆ ಅರ್ಜಿದಾರರು ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಿ ನಂತರ ಅರ್ಜಿದಾರರು ಸಲ್ಲಿಸಿರುವ ಅರ್ಜಿ **ನಮೂನೆ-1** ರ ಪ್ರತಿಯೊಂದಿಗೆ ಹಾಗೂ ಸಲ್ಲಿಸಿರುವ ದಾಖಲೆಗಳನ್ನು ದೃಢೀಕರಿಸಿ / ವಿನ್ಯಾಸದ ತಾಂತ್ರಿಕ ಪರಿಶೀಲನೆ / ಅನುಮೋದನೆಗಾಗಿ ಸಂಬಂಧಪಟ್ಟ ವ್ಯಾಪ್ತಿಯಲ್ಲಿನ ತಾಲ್ಲೂಕು ಪಂಚಾಯತಿ ಕಛೇರಿಗೆ **ನಮೂನೆ-2ಎ** ಕಳುಹಿಸತಕ್ಕದ್ದು.

1.4 ತಾಲ್ಲೂಕು ಪಂಚಾಯತಿಯು ಕಂಡಿಕೆ 6.1 ರಿಂದ 13.18 ರವರೆಗೆ ವಿವರಿಸಿದ ಕ್ರಮಗಳನ್ನು ಅನುಸರಿಸಿ, ಅನುಮೋದನೆ ಬಗ್ಗೆ ತೀರ್ಮಾನ ತೆಗೆದುಕೊಳ್ಳತಕ್ಕದ್ದು.

1.5 ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯು ವಹಿಸಿರುವ ಕಾರ್ಯವನ್ನು ಸರಿಯಾಗಿ ನಿರ್ವಹಿಸಿರುವ ಬಗ್ಗೆ ಅಥವಾ ನಿರ್ವಹಿಸದಿರುವ ಬಗ್ಗೆ ಜಿಲ್ಲಾ ಪಂಚಾಯತಿಯ ಉಪಕಾರ್ಯದರ್ಶಿ / ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಮೇಲ್ವಿಚಾರಣೆ ಮಾಡತಕ್ಕದ್ದು.

## ಭಾಗ–2

**ಸ್ಥಳೀಯ ಯೋಜನಾ ಪ್ರದೇಶದ ಹೊರಭಾಗದಲ್ಲಿನ ಒಂದು ಎಕರೆ ಪ್ರದೇಶಕ್ಕಿಂತ ಹೆಚ್ಚಿರುವ ಬಹು ನಿವೇಶನ ವಸತಿ ಮತ್ತು ವಸತಿಯೇತರ ಭೂ ಪರಿವರ್ತಿತ ಜಮೀನುಗಳಲ್ಲಿನ ವಸತಿ/ ವಸತಿಯೇತರ ವಿನ್ಯಾಸ ಅನುಮೋದನೆಗಾಗಿ ಅನುಸರಿಸಬೇಕಾದ ವಿಧಾನಗಳು-:**

2. ಸ್ಥಳೀಯ ಸಂಸ್ಥೆಯು ವಿನ್ಯಾಸ ಅನುಮೋದನೆಗಾಗಿ ಸ್ವೀಕರಿಸಲಾದ ಅರ್ಜಿಗಳ ಪರಿಶೀಲನೆ ಹಾಗೂ ಕ್ರಮ ಕೈಗೊಳ್ಳುವ ಬಗ್ಗೆ.

2.1 ವಿನ್ಯಾಸ ಅನುಮೋದನೆಗಾಗಿ ನಿಗಧಿಪಡಿಸಿರುವ ಅರ್ಜಿಯನ್ನು, ಅರ್ಜಿದಾರರು/ ಅಭಿವೃದ್ಧಿದಾರರು ಸಂಬಂಧಿಸಿದ ಸ್ಥಳೀಯ ಸಂಸ್ಥೆಗೆ (ಗ್ರಾಮ ಪಂಚಾಯತ್) ಪ್ರಶ್ನಿತ ಜಮೀನಿನ ವಿಸ್ತೀರ್ಣಕ್ಕನುಗುಣವಾಗಿ ಪರಿಮಾಣಕ್ಕೆ ತಯಾರಿಸಿದ 5 ವಿನ್ಯಾಸಗಳ ಪ್ರತಿಗಳು ಸೇರಿದಂತೆ ನಿಗಧಿತ ಅರ್ಜಿ ನಮೂನೆ–I ರಲ್ಲಿ ಸೂಚಿಸಿರುವ ಅಗತ್ಯ ದಾಖಲಾತಿಗಳನ್ನು ಲಗತ್ತಿಸಿ ಅರ್ಜಿಯನ್ನು ಭರ್ತಿಮಾಡಿ ಅರ್ಜಿಯ ಜೊತೆಗೆ ಅನುಬಂಧ–I ರಲ್ಲಿರುವಂತೆ ನೋಟರಿ ದೃಢೀಕೃತ ಪ್ರಮಾಣ ಪತ್ರದೊಂದಿಗೆ ಸಲ್ಲಿಸತಕ್ಕದ್ದು.

2.2 ಸ್ಥಳೀಯ ಸಂಸ್ಥೆಯು ವಿನ್ಯಾಸ ಅನುಮೋದನೆ ಕೋರಿ ಸ್ವೀಕರಿಸಿದ ಅರ್ಜಿಯನ್ನು ಹಾಗೂ ಲಗತ್ತಿಸಿದ ದಾಖಲಾತಿಗಳನ್ನು ಈ ಕೆಳಕಂಡ ಅಂಶಗಳ ಬಗ್ಗೆ ಪರಿಶೀಲಿಸಿಕೊಳ್ಳತಕ್ಕದ್ದು.

2.2.1. ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಕಂದಾಯ ಇಲಾಖೆಯು ಹೊರಡಿಸಿದ ಭೂ ಪರಿವರ್ತನೆ ಆದೇಶದ ಪ್ರತಿ ಇದೆಯೇ ? – ಹೌದು / ಇಲ್ಲ

2.2.2. ಜಮೀನಿನ ಮಾಲೀಕತ್ವದ ಬಗ್ಗೆ (ಕ್ರಯ ಪತ್ರ, ವಿಭಾಗ ಪತ್ರ, ವಂಶಪಾರಂಪರ ಪತ್ರ ಇತ್ಯಾದಿ) ಸರಿಯಾದ ದಾಖಲಾತಿ ಕುರಿತು ಪರಿಶೀಲಿಸಿ, ತೃಪ್ತಿದಾಯಕವಾಗಿದೆಯೇ? – ಹೌದು / ಇಲ್ಲ

2.2.3. ಪ್ರಶ್ನಿತ ಜಮೀನು, ಕರ್ನಾಟಕ ಗೃಹಮಂಡಳಿಯಲ್ಲಿ ಅಥವಾ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (KIADB) ಸೇರಿದಂತೆ ಯಾವುದಾದರೂ ಇತರೆ ಸಂಸ್ಥೆಗಳಿಂದ ಭೂ ಸ್ವಾಧೀನದ ಪ್ರಕ್ರಿಯೆಯಲ್ಲಿ ಒಳಗೊಂಡಿದೆಯೇ? – ಒಳಗೊಂಡಿದೆ / ಒಳಗೊಂಡಿಲ್ಲ.

2.2.4. ಜಮೀನಿನ ಮಾಲೀಕರು ಅಥವಾ ಅಧಿಕೃತ ಅಧಿಕಾರ ಹೊಂದಿದ ವ್ಯಕ್ತಿಯ ಮಾತ್ರ ವಿನ್ಯಾಸ ಅನುಮೋದನೆ ಅರ್ಜಿಯನ್ನು ಸಲ್ಲಿಸಿದ್ದಾರೆಯೇ? – ಹೌದು / ಇಲ್ಲ

2.2.5. ಪ್ರಶ್ನಿತ ಜಮೀನು ಋಣಭಾರ ರಹಿತವಾಗಿದೆಯೇ? – ಹೌದು / ಇಲ್ಲ

2.2.6. ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಅಧಿಕೃತ ಅಟ್ಲಾಸ್ ಅಥವಾ ಇ–ನಕಾಶೆ (ಇ–Sketch) ಮೂಲ ಪ್ರತಿಯಲ್ಲಿ ಅಳತೆಗಳನ್ನು ಅಳವಡಿಸಿ ಲಗತ್ತಿಸಿದೆಯೇ? ಹೌದು / ಇಲ್ಲ

2.2.7. ಕಂದಾಯ ದಾಖಲಾತಿಯಲ್ಲಿ ನಮೂದಿತವಾದ 'ಅ' ಖರಾಬು ಅಥವಾ 'ಬಿ' ಖರಾಬು ಜಾಗವನ್ನು ಅಟ್ಲಾಸ್‌ನಲ್ಲಿ ನಿಖರವಾಗಿ ಅಳತೆಗಳೊಂದಿಗೆ ಅಳವಡಿಸಿ ಗುರ್ತಿಸಿದೆಯೇ? – ಹೌದು / ಇಲ್ಲ

2.2.8. ಪ್ರಶ್ನಿತ ಜಮೀನು, ಸೂಕ್ತವಾದ ಸಾರ್ವಜನಿಕ ರಸ್ತೆ ಸಂಪರ್ಕ ಹೊಂದಿರತಕ್ಕದ್ದು. (NH/SH/MDR/ ODR/Village road ಅಥವಾ ಅನುಮೋದಿತ ವಿನ್ಯಾಸದಲ್ಲಿನ ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಿದ ರಸ್ತೆ ಅಥವಾ ಅಭಿವೃದ್ಧಿ ಹೊಂದಿದ ಸ್ಥಳೀಯ ಸಂಸ್ಥೆಗೆ ಹಸ್ತಾಂತರಿಸಿದ ಒಳ ರಸ್ತೆ) – ಹೌದು / ಇಲ್ಲ.

2.2.9. ಪ್ರಶ್ನಿತ ಜಮೀನಿಗೆ ಸಂಬಂಧಿಸಿದಂತೆ ಗ್ರಾಮ ನಕ್ಷೆಯಲ್ಲಿ ಉದ್ದೇಶಿತ ವಿನ್ಯಾಸದ ಪ್ರದೇಶವನ್ನು ಗುರ್ತಿಸಿ ಲಗತ್ತಿಸಿದೆಯೇ? – ಹೌದು / ಇಲ್ಲ.

2.2.10. ಪ್ರಶ್ನಿತ ಜಮೀನನ್ನು ಹಾಲಿ ಇರುವ ಆಯಾಮಗಳೊಂದಿಗೆ ಅಳತೆಗೆ ನಕ್ಷೆಯನ್ನು ತಯಾರಿಸಿ ಹಾಲಿ ಇರುವ Physical Features ಅಂದರೆ ನಾಲೆ, ಹಳ್ಳ, ವಿದ್ಯುತ್ ತಂತಿ, ಹಾಲಿ ರಸ್ತೆ ಮತ್ತು ವರ್ಗೀಕರಣ ಹಾಗೂ ಇತರೆ ಮಾಹಿತಿಗಳನ್ನು ಒಳಗೊಂಡ ಸ್ಥಳ ನಕ್ಷೆಯನ್ನು ಸಲ್ಲಿಸಿದೆಯೇ? – ಹೌದು / ಇಲ್ಲ.

2.2.11 ಪ್ರಶ್ನಿತ ಜಮೀನಿನ ಸುತ್ತಮುತ್ತ ಇರಬಹುದಾದ ಸ್ಮಶಾನ/ ಕ್ವಾರಿ/ ನೀರು ಸಂಗ್ರಹಿತ ತಗ್ಗು ಪ್ರದೇಶ/ ಅಸಮರ್ಪಕ ಚರಂಡಿ/ ಸ್ವಾಭಾವಿಕ ನೀರಿನ ಹರಿವು ಅಥವಾ ಅನಾರೋಗ್ಯಕರ ವಾತಾವರಣಗಳಿಂದಾಗಿ ಉದ್ದೇಶಿತ ವಿನ್ಯಾಸ ಅಭಿವೃದ್ಧಿಪಡಿಸಲು ಯಾವುದೇ ತೊಂದರೆಯಾಗವುದೇ? – ಹೌದು / ಇಲ್ಲ.

2.2.12. ಉದ್ದೇಶಿತ ವಿನ್ಯಾಸದ ಪ್ರಸ್ತಾವನೆಯ ರಸ್ತೆ ಜಾಲವು/ ಪ್ರಶ್ನಿತ ಜಮೀನಿಗೆ ಲಗತ್ತಾದಂತೆ ಹಾಲಿ ಇರುವ ಬಡಾವಣೆ ಅಥವ ಅನುಮೋದಿತ ವಿನ್ಯಾಸಗಳ ರಸ್ತೆ ಜಾಗವನ್ನು ಯಥಾವತ್ತಾಗಿ ಮುಂದುವರೆಸುವಂತೆ ಇರುವುದೇ? – ಹೌದು / ಇಲ್ಲ.

2.3 ಮೇಲ್ಕಂಡಂತೆ ಅರ್ಜಿದಾರರು ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಿ ನಂತರ ಅರ್ಜಿದಾರರು ಸಲ್ಲಿಸಿರುವ ಅರ್ಜಿ **ನಮೂನೆ-1** ರ ಪ್ರತಿಯೊಂದಿಗೆ ಹಾಗೂ ಸಲ್ಲಿಸಿರುವ ದಾಖಲೆಗಳನ್ನು ದೃಢೀಕರಿಸಿ / ವಿನ್ಯಾಸದ ತಾಂತ್ರಿಕ ಪರಿಶೀಲನೆ / ಅನುಮೋದನೆಗಾಗಿ ಸಂಬಂಧಪಟ್ಟ ವ್ಯಾಪ್ತಿಯಲ್ಲಿನ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿಗೆ **ನಮೂನೆ-2** ಕಳುಹಿಸತಕ್ಕದ್ದು.

## 3. ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯು ಸ್ಥಳೀಯ ಸಂಸ್ಥೆಯಿಂದ ಸ್ವೀಕರಿಸಲಾದ ಅರ್ಜಿಗಳ ಬಗ್ಗೆ ಪರಿಶೀಲನೆ ಹಾಗೂ ಕ್ರಮ ಕೈಗೊಳ್ಳುವ ಬಗ್ಗೆ ಅನುಸರಿಸಬೇಕಾದ ವಿಧಾನಗಳು

3.1 ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಜಿಲ್ಲಾ ಕಾರ್ಯಾಲಯದಲ್ಲಿ ಸದರಿ ಅರ್ಜಿಯನ್ನು ಪರಿಶೀಲಿಸಿ, ಪ್ರಶ್ನಿತ ಜಮೀನಿನ ಸ್ಥಳ ಸಮೀಕ್ಷೆ ನಡೆಸಿ, ಗಮನಿಸಿದ ಭೌಗೋಳಿಕ ಅಂಶಗಳನ್ನು ಆಧರಿಸಿ ಯೋಜನಾ ತತ್ವಗಳಡಿಯಲ್ಲಿ ನಿಗಧಿಪಡಿಸಿದ ಮಾನದಂಡಗಳಿಗೆ ಅರ್ಜಿದಾರರು ಸಲ್ಲಿಸಿರುವ ವಿನ್ಯಾಸ ನಕ್ಷೆಯು ತಾಳೆ ಹೊಂದುತ್ತಿರುವ ಬಗ್ಗೆ ಪರಿಶೀಲಿಸಿಕೊಳ್ಳತಕ್ಕದ್ದು. ಹಾಗೂ ಅಗತ್ಯವಿದ್ದಲ್ಲಿ ಸಲ್ಲಿಸಿರುವ ವಿನ್ಯಾಸ ನಕ್ಷೆಯನ್ನು ಪರಿಷ್ಕರಿಸಿ ವಿನ್ಯಾಸ ತಯಾರಿಸುವ ಬಗ್ಗೆ ನಿರ್ಣಯ ಕೈಗೊಳ್ಳತಕ್ಕದ್ದು.

3.2 ಸ್ಥಳೀಯ ಸಂಸ್ಥೆಯ ಮುಖಾಂತರ ಸ್ವೀಕರಿಸಿದ ವಿನ್ಯಾಸ ಅನುಮೋದನೆ ಪ್ರಸ್ತಾವನೆ ಬಗ್ಗೆ, ಲಗತ್ತಿಸಿದ ದಾಖಲಾತಿಗಳನ್ನು ಆಧರಿಸಿ ವಿನ್ಯಾಸದ ತಾಂತ್ರಿಕ ಅನುಮೋದನೆಗೆ ಪರಿಗಣಿಸುವ ಅಥವಾ ನಿರಾಕರಿಸುವ ಅಥವಾ ಅಗತ್ಯವೆನಿಸಿದ ಹೆಚ್ಚುವರಿ/ ಪೂರಕ ದಾಖಲಾತಿಗಳನ್ನು ಪಡೆಯುವ ಕುರಿತು ಜಿಲ್ಲಾ ಕಾರ್ಯಾಲಯದಲ್ಲಿ ನಿರ್ಣಯಿಸತಕ್ಕದ್ದು.

3.3 ವಿನ್ಯಾಸ ಅನುಮೋದನೆ ಸಂಬಂಧ ಒದಗಿಸಿದ ದಾಖಲೆಗಳನ್ನು ಪರಿಶೀಲಿಸಿ ಹೆಚ್ಚುವರಿ ಮಾಹಿತಿ / ದಾಖಲಾತಿಗಳು ಅವಶ್ಯವೆಂದು ನಿರ್ಣಯಿಸಿದಲ್ಲಿ ಅಂತಹ ಪೂರಕ ಮಾಹಿತಿ/ ದಾಖಲಾತಿಗಳನ್ನು ಸ್ಪಷ್ಟವಾಗಿ ನಮೂದಿಸಿ ಸದರಿ ದಾಖಲಾತಿಗಳನ್ನು ಒದಗಿಸಲು 15 ದಿವಸ ಕಾಲಮಿತಿಯನ್ನು ನಿಗಧಿಪಡಿಸಿ ಲಿಖಿತವಾಗಿ ನಮೂನೆ-3 ರಂತೆ ಪತ್ರದ ಮೂಲಕ ಅರ್ಜಿದಾರರಿಗೆ / ಅಭಿವೃದ್ಧಿದಾರರಿಗೆ ತಿಳಿಸತಕ್ಕದ್ದು. ಹಾಗೂ ಯಥಾ ಪ್ರತಿಯನ್ನು ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗೆ ಕಳುಹಿಸತಕ್ಕದ್ದು.

3.4 ಅರ್ಜಿದಾರರು ನಿಗಧಿತ ಕಾಲಮಿತಿಯಲ್ಲಿ ಪೂರಕ ಮಾಹಿತಿ / ದಾಖಲಾತಿಗಳನ್ನು ಸಲ್ಲಿಸದೇ ಇದ್ದಲ್ಲಿ, ಪ್ರಕರಣವನ್ನು ತಿರಸ್ಕರಿಸಿ ಅರ್ಜಿದಾರರಿಗೆ ಹಿಂಬರಹವನ್ನು ನಮೂನೆ-3 ರ ಪ್ರಕಾರ ನೀಡತಕ್ಕದ್ದು. ಹಾಗೂ ಯಥಾ ಪ್ರತಿಯನ್ನು ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗೆ ಕಳುಹಿಸತಕ್ಕದ್ದು.

3.5 ಸಲ್ಲಿಸಿರುವ ವಿನ್ಯಾಸ ನಕ್ಷೆಯು ಹಾಗೂ ವಿನ್ಯಾಸ ಅನುಮೋದನೆಗಾಗಿ ಸಲ್ಲಿಸಿರುವ ದಾಖಲೆಗಳು ಆಯಾ ಪ್ರಕರಣಕ್ಕೆ ಸಂಬಂಧಿಸಿದಂತೆ ಸೂಚಿಸಿರುವ ನಿಯಮಗಳಿಗೆ ತಾಳೆ ಹೊಂದುತ್ತಿರುವ ಬಗ್ಗೆ ಪರಿಶೀಲನಾ ಪಟ್ಟಿ ನಮೂನೆ-4 ರಲ್ಲಿ ಪರಿಶೀಲಿಸಿಕೊಂಡು ದಾಖಲಿಸತಕ್ಕದ್ದು. ಪ್ರಸ್ತುತ ರಾಷ್ಟ್ರೀಯ ಹೆದ್ದಾರಿ, ರಾಜ್ಯ ಹೆದ್ದಾರಿ ಮತ್ತು ರಿಂಗ್ ರಸ್ತೆಗಳಲ್ಲಿ ಮುಂದಿನ ಬೆಳವಣಿಗೆಯನ್ನು **ಗಮನದಲ್ಲಿಟ್ಟುಕೊಂಡು ಲೇಔಟ್ ನಿರ್ಮಾಣಕ್ಕೆ ಅನುಮೋದನೆ ನೀಡತಕ್ಕದ್ದು.**

3.6 ಸಲ್ಲಿಸಿರುವ ವಿನ್ಯಾಸ ನಕ್ಷೆಯನ್ನು ತಾಂತ್ರಿಕ ಅನುಮೋದನೆ ನೀಡಲು ಪ್ರಕರಣವನ್ನು ಪರಿಗಣಿಸಿದಲ್ಲಿ, ಹಾಗೂ ತಿದ್ದುಪಡಿ ಮಾಡಬೇಕಾದಲ್ಲಿ ಹಾಗೂ ಉದ್ದೇಶಿತ ವಿನ್ಯಾಸದ "ತಾಂತ್ರಿಕ ನಕ್ಷೆ" ಯನ್ನು (Technical Drawing) ತಯಾರಿಸಲು ಕ್ರಮವಹಿಸತಕ್ಕದ್ದು.

3.7 ವಿನ್ಯಾಸಕ್ಕೆ ತಾಂತ್ರಿಕ ಅನುಮೋದನೆ ನೀಡುವ ಮೊದಲು ವಿನ್ಯಾಸ ಪರಿಶೀಲನೆ / ತಯಾರಿಕೆ ಸಂಬಂಧ ಸರ್ಕಾರದಿಂದ/ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ಕಾಲಕಾಲಕ್ಕೆ ನಿಗಧಿಪಡಿಸಿದ ಶುಲ್ಕವನ್ನು ಇಲಾಖಾ ಲೆಕ್ಕಶೀರ್ಷಿಕೆಗೆ ಅರ್ಜಿದಾರರಿಂದ / ಅಭಿವೃದ್ಧಿದಾರರಿಂದ ಪಾವತಿಸಿಕೊಳ್ಳತಕ್ಕದ್ದು.

3.8 ಶುಲ್ಕ ಪಾವತಿಸಿಕೊಂಡ ನಂತರ ನಕ್ಷೆಗೆ ತಾಂತ್ರಿಕ ಅನುಮೋದನೆ ನೀಡುವ ಬಗ್ಗೆ ನಗರ ಮತ್ತು ಗ್ರಾಮಾಂತರ ನಿರ್ದೇಶನಾಲಯದಿಂದ ವಿನ್ಯಾಸ ಅನುಮೋದನೆಗಾಗಿ ನಿಗಧಿಪಡಿಸಿರುವ ಅಧಿಕಾರ ಪ್ರತ್ಯೋಜನೆಯಂತೆ ತಾಂತ್ರಿಕ ಅನುಮೋದನೆ ನೀಡುವ ಬಗ್ಗೆ ಕ್ರಮವಹಿಸತಕ್ಕದ್ದು.

3.9 ತಾಂತ್ರಿಕ ಅನುಮೋದನೆ ನೀಡುವ ಆಯಾ ಕಛೇರಿಗಳು ವಿನ್ಯಾಸ ನಕ್ಷೆಗಳಿಗೆ ತಾಂತ್ರಿಕ ಅನುಮೋದನೆ ನೀಡಿರುವ ಬಗ್ಗೆ ವಿನ್ಯಾಸ ನಕ್ಷೆ ಸಂಖ್ಯೆ ದಾಖಲಿಸಿ ವಿನ್ಯಾಸ ಅನುಮೋದನೆಯ ಪೂರ್ಣ ಮಾಹಿತಿಯನ್ನು'ವಿನ್ಯಾಸ ವಹಿ' ಯಲ್ಲಿ (Register of sub-division plan) ದಾಖಲು ಮಾಡಿಕೊಳ್ಳತಕ್ಕದ್ದು.

3.10 ತಾಂತ್ರಿಕ ಅನುಮೋದನೆ ನೀಡಿದ ವಿನ್ಯಾಸ ನಕ್ಷೆಯ 3 ಪ್ರತಿಗಳನ್ನು ಹಾಗೂ ಆಯಾ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಧಿಸಬೇಕಾದ ಷರತ್ತುಗಳನ್ನು ವಿಧಿಸಿ ಆದೇಶ ಪ್ರತಿಯೊಂದಿಗೆ ಸಂಬಂಧಿತ ಸ್ಥಳೀಯ ಸಂಸ್ಥೆಗೆ ಮುಂದಿನ ಕ್ರಮಕ್ಕಾಗಿ ರವಾನಿಸತಕ್ಕದ್ದು. ಹಾಗೂ ಅದರ ಪ್ರತಿಯನ್ನು ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಗೆ ಸಲ್ಲಿಸತಕ್ಕದ್ದು.

4. ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ತಾಂತ್ರಿಕ ಅನುಮೋದನೆ ಪಡೆದ ನಂತರ ವಿನ್ಯಾಸವನ್ನು ಬಿಡುಗಡೆ ಮಾಡುವ ಬಗ್ಗೆ ಮತ್ತು ಅಭಿವೃದ್ಧಿಪಡಿಸಲು ಸ್ಥಳೀಯ ಸಂಸ್ಥೆಯು ಅನುಸರಿಸಬೇಕಾದ ಮುಂದಿನ ಕ್ರಮಗಳು

4.1 ಸ್ಥಳೀಯ ಸಂಸ್ಥೆಯು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ತಾಂತ್ರಿಕ ಅನುಮೋದನೆ ನೀಡಿದ ವಿನ್ಯಾಸಕ್ಕೆ ಅನುಮೋದನೆ ನೀಡುವ ಬಗ್ಗೆ ಗ್ರಾಮ ಪಂಚಾಯ್ತಿಯ ಸಾಮಾನ್ಯ ಸಭೆಯಲ್ಲಿ ಮಂಡಿಸಿ ಅನುಮೋದನೆ ಪಡೆಯುವುದು.

4.2 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ಇಲಾಖೆಯು ನಿಗಧಿಪಡಿಸಿದ ಹಾಗೂ ಸೂಚಿತ ಮಾರ್ಗಸೂಚನೆಯನ್ವಯ ಶುಲ್ಕಗಳನ್ನು ಹಾಗೂ ಬಡಾವಣೆಗೆ ಗ್ರಾಮ ಪಂಚಾಯ್ತಿಯಿಂದಲೇ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಬಗ್ಗೆ ಅರ್ಜಿದಾರರು ಒಪ್ಪಿಗೆ ನೀಡಿದ್ದಲ್ಲಿ, ಮೂಲಭೂತ ಸೌಕರ್ಯ ಒದಗಿಸುವ ಕಾಮಗಾರಿಗಳಿಗೆ ತಗಲುವ ಅಂದಾಜು ಪಟ್ಟಿಯನ್ನು ಸಕ್ಷಮ ಇಲಾಖೆಯಿಂದ ಪಡೆದುಕೊಂಡು ಅಂದಾಜು ಪಟ್ಟಿಯಂತೆ ಅಭಿವೃದ್ಧಿ ಶುಲ್ಕವನ್ನು ಪಾವತಿಸುವ ಬಗ್ಗೆ ಅರ್ಜಿದಾರರಿಗೆ / ಅಭಿವೃದ್ಧಿದಾರರಿಗೆ ತಿಳುವಳಿಕೆ ನೀಡಿ ಮುಂಗಡವಾಗಿ ಪಂಚಾಯ್ತಿಗೆ ಪಾವತಿಸಿಕೊಳ್ಳತಕ್ಕದ್ದು. ಲೇಔಟ್ ಮಾಡುವ ಅರ್ಜಿದಾರರು ಅಂದಾಜು ವೆಚ್ಚಕ್ಕೆ ಅನುಗುಣವಾಗಿ ಪ್ರಸ್ತುತ ನಿಗದಿಪಡಿಸಿರುವ ಅಭಿವೃದ್ಧಿ ಶುಲ್ಕಕ್ಕೆ ಹೆಚ್ಚುವರಿಯಾಗಿ ಶೇ 5 ರಷ್ಟು ಸೇವಾ ಶುಲ್ಕ ಮತ್ತು ಶೇ 5 ರಷ್ಟು ನಿರ್ವಹಣಾ ಶುಲ್ಕವನ್ನು ಪಾವತಿಸತಕ್ಕದ್ದು.

4.3 ಸ್ಥಳೀಯ ಸಂಸ್ಥೆಯು ಅರ್ಜಿದಾರರಿಂದ ಶುಲ್ಕ ಪಾವತಿಸಿಕೊಂಡ ನಂತರ ಉದ್ದೇಶಿತ ವಿನ್ಯಾಸವು ಬಹು ನಿವೇಶನ ವಸತಿ ವಿನ್ಯಾಸ ಅಥವಾ ಬಹು ನಿವೇಶನ ವಸತಿಯೇತರ ವಿನ್ಯಾಸವಾಗಿದ್ದಲ್ಲಿ, ಗ್ರಾಮ ಪಂಚಾಯತಿಯ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ತಾಂತ್ರಿಕ ಅನುಮೋದನೆ ನೀಡಲಾದ ವಿನ್ಯಾಸ ನಕ್ಷೆಯ ಮೇಲೆ ವಿನ್ಯಾಸ ನಕ್ಷೆಯನ್ನು "ನೆಲದ ಮೇಲೆ ಅಳತೆಪಡಿಸಲು ಮಾತ್ರ (For demarcation purpose only )" ಎಂದು ಷರಾ ಬರೆದು ಅರ್ಜಿದಾರರಿಗೆ ವಿನ್ಯಾಸ ನಕ್ಷೆ ರೀತಿ ನೆಲದ ಮೇಲೆ ರಸ್ತೆ ಜಾಲ, ಉದ್ಯಾನವನ / ಆಟದ ಮೈದಾನ/ ಬಯಲು ಪ್ರದೇಶ ಮತ್ತು ನಾಗರೀಕ ಸೌಲಭ್ಯಕ್ಕಾಗಿ ಕಾಯ್ದಿರಿಸಿರುವ ಪ್ರದೇಶಗಳನ್ನು ಮತ್ತು ನಿವೇಶನಗಳನ್ನು ಗುರ್ತಿಸಲು ತಿಳಿಸತಕ್ಕದ್ದು.

4.4 ಅರ್ಜಿದಾರರು ವಿನ್ಯಾಸ ನಕ್ಷೆಯನ್ನು ನೆಲದ ಮೇಲೆ ಅಳತೆಪಡಿಸಿ ಗುರ್ತಿಸಿದ ನಂತರ ವಿನ್ಯಾಸ ನಕ್ಷೆಯಂತೆ ನೆಲದ ಮೇಲೆ ಗುರ್ತಿಸಿರುವ ಬಗ್ಗೆ ಗ್ರಾಮ ಪಂಚಾಯತಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ಪರಿಶೀಲಿಸಿಕೊಂಡು ವಿನ್ಯಾಸದಲ್ಲಿ ಕಾಯ್ದಿರಿಸಿದ ಉದ್ಯಾನವನ / ಆಟದ ಮೈದಾನ/ ಬಯಲು ಪ್ರದೇಶ, ನಾಗರೀಕ ಸೌಲಭ್ಯ ಪ್ರದೇಶ ಮತ್ತು ರಸ್ತೆ ಜಾಗಗಳನ್ನು ನೊಂದಾಯಿತ ಪರಿತ್ಯಜನಾ ಪತ್ರದ ಮೂಲಕ ನಮೂನೆ-5 ರಲ್ಲಿರುವಂತೆ ಗ್ರಾಮ ಪಂಚಾಯತಿಗೆ ಅರ್ಜಿದಾರರಿಂದ / ಅಭಿವೃದ್ಧಿದಾರರಿಂದ ಹಸ್ತಾಂತರಿಸಿಕೊಳ್ಳತಕ್ಕದ್ದು. ನಾಗರೀಕ ನಿವೇಶನಗಳ ಬಗ್ಗೆ ನಿಯಮಗಳಿದ್ದು, ಅದರನ್ವಯ ಕ್ರಮವಹಿಸತಕ್ಕದ್ದು. ಪಾರ್ಕ್ ಅಭಿವೃದ್ಧಿಗೆ ಜಿಲ್ಲಾ ಪಂಚಾಯತಿ ವ್ಯಾಪ್ತಿಗೆ ಬರುವ ತೋಟಗಾರಿಕೆ ಇಲಾಖೆಯ ತಾಲ್ಲೂಕು ಮಟ್ಟದ / ಜಿಲ್ಲಾ ಮಟ್ಟದ ಅಧಿಕಾರಿಗಳ ಸಹಾಯ ಪಡೆಯತಕ್ಕದ್ದು.

4.5 ಉದ್ದೇಶಿತ ಬಡಾವಣೆಯನ್ನು ಗ್ರಾಮ ಪಂಚಾಯತಿ ಅಭಿವೃದ್ಧಿಪಡಿಸುವಂತೆ ಅರ್ಜಿದಾರರು/ ಅಭಿವೃದ್ಧಿದಾರರು ಅಪೇಕ್ಷಿಸಿದಲ್ಲಿ, ಬಡಾವಣೆ ಅಭಿವೃದ್ಧಿಗೆ ತಗಲುವ ಅಂದಾಜು ಪಟ್ಟಿಯನ್ವಯ ಸಂಪೂರ್ಣ ಮೊತ್ತವನ್ನು (ಶೇ.100) ಗ್ರಾಮ ಪಂಚಾಯತಿಯು ಮುಂಗಡವಾಗಿ ಪಾವತಿಸಿಕೊಳ್ಳತಕ್ಕದ್ದು.

4.6 ಒಂದುವೇಳೆ ಅರ್ಜಿದಾರರು/ ಅಭಿವೃದ್ಧಿದಾರರು ವಿನ್ಯಾಸವನ್ನು ತಾವೇ ಅಭಿವೃದ್ಧಿಪಡಿಸಲು ಅಪೇಕ್ಷಿಸಿದಲ್ಲಿ ಕಾಮಗಾರಿಗಳನ್ನು ಗ್ರಾಮ ಪಂಚಾಯತಿಯ ತಾಂತ್ರಿಕ ಸಿಬ್ಬಂದಿ ಇವರ ಮೇಲ್ವಿಚಾರಣೆಯೊಂದಿಗೆ ಮಾಡತಕ್ಕದ್ದು.

4.7 ಅಭಿವೃದ್ಧಿ ಶುಲ್ಕವನ್ನು ಮುಂಗಡವಾಗಿ ಪಾವತಿಸಿಕೊಳ್ಳುವ ಸಂದರ್ಭದಲ್ಲಿ ಗ್ರಾಮ ಪಂಚಾಯತಿಯ ಶೀಘ್ರವಾಗಿ ವಿನ್ಯಾಸ ಪ್ರಸ್ತಾವನೆಗಳಿಗೆ ಅನುಗುಣವಾಗಿ ಕಾಮಗಾರಿಗಳನ್ನು ನಿರ್ವಹಿಸಲು ಅಂದಾಜು ಪಟ್ಟಿಯನ್ನು ಸಿದ್ದಪಡಿಸತಕ್ಕದ್ದು.

4.8 ಗ್ರಾಮ ಪಂಚಾಯತಿ ಪಂಚಾಯತಿ ಅಭಿವೃದ್ಧಿ ಅಧಿಕಾರಿಯು ತಾಂತ್ರಿಕವಾಗಿ ಅನುಮೋದನೆ ನೀಡಲಾದ ವಿನ್ಯಾಸ ನಕ್ಷೆಯಲ್ಲಿ ನೋಂದಾವಣೆಗಾಗಿ ಬಿಡುಗಡೆ ಮಾಡಬೇಕಾದ **ಶೇ.60 ರಷ್ಟು ನಿವೇಶನಗಳನ್ನು ಚದುರಿದಂತೆ ಗುರ್ತಿಸತಕ್ಕದು.**

4.9 ಸ್ಥಳೀಯ ಸಂಸ್ಥೆಯು ಸೂಚಿಸಿರುವಂತೆ ಅಭಿವೃದ್ಧಿ ಕಾಮಗಾರಿಗಳನ್ನು ನಿಗಧಿತ ಅವಧಿಯಲ್ಲಿ ಅರ್ಜಿದಾರರು / ಅಭಿವೃದ್ಧಿದಾರರು ಕೈಗೊಳ್ಳದೇ ಇದ್ದಲ್ಲಿ, **ಉಳಿದಂತೆ 40 ರಷ್ಟು ನಿವೇಶನಗಳನ್ನು ಗ್ರಾಮ ಪಂಚಾಯತಿಯ ಹರಾಜಿನಲ್ಲಿ ಮಾರಾಟ ಮಾಡಿ** ವಿನ್ಯಾಸ ಅಭಿವೃದ್ಧಿಪಡಿಸಲು ಕ್ರಮ ಕೈಗೊಳ್ಳುವ ಬಗ್ಗೆ, ಅಧಿಕಾರ ಇರುವ ಬಗ್ಗೆ ನೋಟರಿ ದೃಢೀಕೃತ ಮುಚ್ಚಳಿಕೆ ಪತ್ರವನ್ನು ಅರ್ಜಿದಾರರು/ ಅಭಿವೃದ್ಧಿದಾರರಿಂದ ಅನುಬಂಧ-2 ರಲ್ಲಿ ಇರುವಂತೆ ಗ್ರಾಮ ಪಂಚಾಯಿತಿಯು ಪಡೆಯತಕ್ಕದ್ದು.

4.10 ಅರ್ಜಿದಾರರಿಂದ/ ಅಭಿವೃದ್ಧಿದಾರರಿಂದ ಶೇ.40 ರಷ್ಟು ನಿವೇಶನಗಳನ್ನು ನಿಬಂಧನೆಗೊಳಪಟ್ಟು ಹಸ್ತಾಂತರಿಸುವ ಬಗ್ಗೆ ನೋಟರಿ ದೃಢೀಕೃತ ಮುಚ್ಚಳಿಕೆ ಪತ್ರ ಪಡೆದ ನಂತರ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಹಣಾಧಿಕಾರಿಯು **ವಿನ್ಯಾಸ ನಕ್ಷೆ ಮಂಜೂರಾತಿ ಆದೇಶ ಪತ್ರ ನಮೂನೆ-6 ರಂತೆ,** ಅನುಮೋದಿತ ನಕ್ಷೆಯ 3 ಪ್ರತಿಗಳು ಹಾಗೂ ಶೇ. 60 ರಷ್ಟು ನಿವೇಶನಗಳನ್ನು ನೊಂದಾವಣೆಗಾಗಿ ಬಿಡುಗಡೆ ಮಾಡಿರುವ ಬಗ್ಗೆ ಪ್ರಮಾಣ ಪತ್ರವನ್ನು ಅನುಬಂಧ-3 ರಂತೆ ಅರ್ಜಿದಾರರಿಗೆ / ಅಭಿವೃದ್ಧಿದಾರರಿಗೆ ನೀಡತಕ್ಕದ್ದು. ಹಾಗೂ ನಿವೇಶನಗಳನ್ನು ನೊಂದಾವಣೆಗಾಗಿ ಬಿಡುಗಡೆ ಮಾಡಿರುವ ಬಗ್ಗೆ ಸಂಬಂಧಪಟ್ಟ ಉಪನೋಂದಾವಣಾಧಿಕಾರಿಗಳ ಕಾರ್ಯಾಲಯಕ್ಕೆ ಅನುಮೋದಿತ ನಕ್ಷೆಯ ಪ್ರತಿಯೊಂದಿಗೆ ಕಳುಹಿಸತಕ್ಕದ್ದು.

4.11. ಅರ್ಜಿದಾರರು / ಅಭಿವೃದ್ಧಿದಾರರು ಮಂಜೂರಾತಿ ಆದೇಶ ಪತ್ರದಲ್ಲಿ ಸೂಚಿಸಿರುವಂತೆ ರಸ್ತೆ, ನೀರು ಸರಬರಾಜು, ಚರಂಡಿ, ಬೀದಿ ದೀಪಗಳ ವ್ಯವಸ್ಥೆ ಸೇರಿದಂತೆ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಅಭಿವೃದೀಪಡಿಸಿದ ನಂತರ **ಅಂತಿಮವಾಗಿ ಉಳಿದ ಶೇ.40 ರಷ್ಟು ನಿವೇಶನಗಳನ್ನು ನೊಂದಾವಣೆಗಾಗಿ ಬಿಡುಗಡೆ ಮಾಡುವ ಪೂರ್ವದಲ್ಲಿ** ಈ ಕೆಳಕಂಡ ಕಾಮಗಾರಿಗಳನ್ನು ತೃಪ್ತಿಕರವಾಗಿ ಪೂರೈಸಿದ ಬಗ್ಗೆ ಸಂಬಂಧಪಟ್ಟ ಇಲಾಖೆಯಿಂದ ನಿರಾಕ್ಷೇಪಣಾ ಪತ್ರಗಳನ್ನು ಪಡೆಯತಕ್ಕದು.

4.11.1. ನೀರು ಸರಬರಾಜು ಹಾಗೂ ಒಳಚರಂಡಿ ವ್ಯವಸ್ಥೆ ಅಳವಡಿಸಿರುವ ಬಗ್ಗೆ ಸಂಬಂಧಪಟ್ಟ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಇಲಾಖೆಯಿಂದ ಹಾಗೂ ಪರಿಸರ ಮತ್ತು ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪಡೆದ ನಿರಾಕ್ಷೇಪಣಾ ಪತ್ರ, ವಿನ್ಯಾಸದ ವಿಸ್ತೀರ್ಣ 4.06 ಹೆಕ್ಟೇರ್‌ಗಿಂತ ಹೆಚ್ಚಾಗಿದ್ದಲ್ಲಿ **ಮೂಲಭೂತ ಸೌಕರ್ಯಗಳಲ್ಲಿ ಒಳಚರಂಡಿ ಮತ್ತು ಘನತ್ಯಾಜ್ಯ ವಿಲೇವಾರಿ ಘಟಕ ಇರತಕ್ಕದ್ದು.**

4.11.2. ಅನುಮೋದಿತ ವಿನ್ಯಾಸದಂತೆ ರಸ್ತೆಗಳ ಡಾಂಬರೀಕರಣ ಸೇರಿದಂತೆ ಸಂಪೂರ್ಣವಾಗಿ ಅಭಿವೃದ್ಧಿ ಪಡಿಸಿರುವ ಬಗ್ಗೆ ಸಂಬಂಧಪಟ್ಟ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಉಪವಿಭಾಗದಿಂದ ಪಡೆದ ನಿರಾಕ್ಷೇಪಣಾ ಪತ್ರ.

4.11.3. ವಿನ್ಯಾಸದಲ್ಲಿನ ಎಲ್ಲಾ ನಿವೇಶನಗಳಿಗೆ ಸಮರ್ಪಕವಾಗಿ ವಿದ್ಯುತ್ ಸರಬರಾಜು ಮಾಡಿರುವ ಬಗ್ಗೆ ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಯಿಂದ ಪಡೆದ ನಿರಾಕ್ಷೇಪಣಾ ಪತ್ರ.

4.12 ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಹಣಾಧಿಕಾರಿಯು ಬಡಾವಣೆಯ ಕಾಮಗಾರಿಗಳನ್ನು ಅರ್ಜಿದಾರರು / ಅಭಿವೃದ್ಧಿದಾರರು ತೃಪ್ತಿಕರವಾಗಿ ನಿರ್ವಹಿಸಿರುವ ಬಗ್ಗೆ ಸಂಬಂಧಪಟ್ಟ ಇಲಾಖೆಗಳಿಂದ ನಿರಾಕ್ಷೇಪಣ ಪತ್ರ ಪಡೆದ ನಂತರ ಶೇ.40 ರಷ್ಟು ನಿವೇಶನಗಳನ್ನು ಬಿಡುಗಡೆ ಮಾಡುವ ಬಗ್ಗೆ ತಾಲ್ಲೂಕು ಪಂಚಾಯತಿ ಸಾಮಾನ್ಯ ಸಭೆಯಲ್ಲಿ ಮಂಡಿಸಿ ಅನುಮೋದನೆ ಪಡೆಯಬೇಕು.

4.13 ನಂತರ ಬಡಾವಣೆಯಲ್ಲಿನ ಮೂಲಭೂತ ಸೌಕರ್ಯಗಳನ್ನು ಗ್ರಾಮ ಪಂಚಾಯತಿಗೆ ಹಸ್ತಾಂತರಿಸಿಕೊಂಡು ಶೇ. 40 ರಷ್ಟು ನಿವೇಶನಗಳನ್ನು ನೊಂದಾವಣೆಗಾಗಿ ಅನುಬಂಧ-4 ರಲ್ಲಿ ಸೂಚಿಸಿರುವಂತೆ ಬಿಡುಗಡೆ ಮಾಡತಕ್ಕದ್ದು. ಹಾಗೂ ನಿವೇಶನಗಳನ್ನು ನೊಂದಾವಣೆಗಾಗಿ ಬಿಡುಗಡೆ ಮಾಡುವುದಾಗಿ ಸಂಬಂಧಪಟ್ಟ ಉಪ ನೊಂದಾಣಾಧಿಕಾರಿಗಳ ಕಾರ್ಯಾಲಯಕ್ಕೆ ಅನುಮೋದಿತ ನಕ್ಷೆಯೊಡನೆ ಮಾಹಿತಿ ನೀಡತಕ್ಕದ್ದು.

**4.14 ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಯು ವಹಿಸಿರುವ ಕಾರ್ಯವನ್ನು ಸರಿಯಾಗಿ ನಿರ್ವಹಿಸಿರುವ ಬಗ್ಗೆ ಅಥವಾ ನಿರ್ವಹಿಸದಿರುವ ಬಗ್ಗೆ ಜಿಲ್ಲಾ ಪಂಚಾಯತಿಯ ಉಪಕಾರ್ಯದರ್ಶಿ / ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಮೇಲ್ವಿಚಾರಣೆ ಮಾಡತಕ್ಕದ್ದು.**

## 5. ನಿವೇಶನಗಳ ವಿವರಣೆ:-

### 5.1. ಏಕ ನಿವೇಶನ ವಸತಿ ವಿನ್ಯಾಸ ನಕ್ಷೆ

ವಿಸ್ತೀರ್ಣದ ಮಿತಿ ಇಲ್ಲದೇ ಒಂದೇ ವಸತಿ ನಿವೇಶನವಿರುವ ಪ್ರಕರಣವನ್ನು ಏಕ ನಿವೇಶನ ವಸತಿ ವಿನ್ಯಾಸ ನಕ್ಷೆ ಎಂದು ಕರೆಯಲ್ಪಡುತ್ತದೆ.

### 5.2. ಬಹು ನಿವೇಶನ ವಸತಿ ವಿನ್ಯಾಸ ನಕ್ಷೆ

ವಿನ್ಯಾಸ ನಕ್ಷೆಯು ಒಂದಕ್ಕಿಂತ ಹೆಚ್ಚು ವಸತಿ ನಿವೇಶನಗಳನ್ನು ಒಳಗೊಂಡಿದ್ದಲ್ಲಿ ಇದನ್ನು ಬಹು ನಿವೇಶನ ವಸತಿ ವಿನ್ಯಾಸ ನಕ್ಷೆ ಎಂದು ಕರೆಯಲ್ಪಡುತ್ತದೆ.

### 5.3.ಏಕ ನಿವೇಶನ ವಸತಿಯೇತರ ವಿನ್ಯಾಸ ನಕ್ಷೆ

ವಿಸ್ತೀರ್ಣದ ಮಿತಿ ಇಲ್ಲದೇ ಒಂದೇ ವಸತಿಯೇತರ ನಿವೇಶನವಿರುವ ಪ್ರಕರಣವನ್ನು ಏಕ ನಿವೇಶನ ವಸತಿಯೇತರ ವಿನ್ಯಾಸ ನಕ್ಷೆ ಎಂದು ಕರೆಯಲ್ಪಡುತ್ತದೆ.

### 5.4. ಬಹು ನಿವೇಶನ ವಸತಿಯೇತರ ವಿನ್ಯಾಸ ನಕ್ಷೆ.

ವಿನ್ಯಾಸ ನಕ್ಷೆಯು ಒಂದಕ್ಕಿಂತ ಹೆಚ್ಚು ವಸತಿಯೇತರ ನಿವೇಶನಗಳನ್ನು ಒಳಗೊಂಡಿದ್ದಲ್ಲಿ ಇದನ್ನು ಬಹು ನಿವೇಶನ ವಸತಿಯೇತರ ವಿನ್ಯಾಸ ನಕ್ಷೆ ಎಂದು ಕರೆಯಲ್ಪಡುತ್ತದೆ.

### 5.5 ವಸತಿ ಮತ್ತು ವಸತಿಯೇತರ ವಿನ್ಯಾಸ ನಕ್ಷೆ

ವಿನ್ಯಾಸ ನಕ್ಷೆಯು ವಸತಿ ಮತ್ತು ವಸತಿಯೇತರ ಉಪಯೋಗಗಳನ್ನು ಒಳಗೊಂಡಿರುತ್ತದೆ.

6. ಒಂದು ಎಕರೆಗಿಂತ ಕಡಿಮೆ ಇರುವ ಹಾಗೂ ವಿಸ್ತೀರ್ಣ ಮಿತಿ ಇಲ್ಲದೇ ಬಹು ನಿವೇಶನ ವಸತಿ ವಿನ್ಯಾಸಗಳಲ್ಲಿರಬೇಕಾದ ಅಂಶಗಳು

6.1 ಬಡಾವಣೆಯ ಆಂತರಿಕ ರಸ್ತೆಯ ಅಗಲವು ಕನಿಷ್ಠ 9.ಮೀ ಇರತಕ್ಕದ್ದು. ಆದರೆ, ಆರ್ಥಿಕವಾಗಿ ದುರ್ಬಲವಾದ ವರ್ಗದವರಿಗಾಗಿ ರಚಿಸಲಾಗುವ 6x9 ಮೀ ನಿವೇಶನಗಳಿಗೆ ಕನಿಷ್ಠ 6.ಮೀ ಅಗಲ ರಸ್ತೆ ಇರತಕ್ಕದ್ದು.

6.2 ಆಟದ ಮೈದಾನ ಹಾಗೂ ಉದ್ಯಾನವನ ಹಾಗೂ ಬಯಲು ಜಾಗಕ್ಕಾಗಿ ಒಟ್ಟಾರೆ ಸ್ವತ್ತಿನ ವಿಸ್ತೀರ್ಣದ ಶೇಕಡ 5 ಕ್ಕಿಂತ ಕಡಿಮೆ ಇರಕೂಡದು.

6.3 ನಾಗರೀಕ ಸೌಲಭ್ಯಕ್ಕಾಗಿ (civic amenities) ಒಟ್ಟಾರೆ ಸ್ವತ್ತಿನ ವಿಸ್ತೀರ್ಣದ ಶೇಕಡ 5ಕ್ಕಿಂತ ಕಡಿಮೆ ಇರಕೂಡದು.

6.4 ಅನಿವಾರ್ಯ ಸಂದರ್ಭದಲ್ಲಿ ಆಟದ ಮೈದಾನ ಹಾಗೂ ಉದ್ಯಾನವನ ಮತ್ತು ಬಯಲು ಜಾಗಕ್ಕೆ ಕಾಯ್ದಿರಿಸಬೇಕಾದ ವಿಸ್ತೀರ್ಣ ಜಾಸ್ತಿಯಾದ ಪಕ್ಷದಲ್ಲಿ ನಾಗರೀಕರ ಸೌಲಭ್ಯ ಉದ್ದೇಶಕ್ಕಾಗಿ ಕಾಯ್ದಿರಿಸಬೇಕಾಗಿರುವುದನ್ನು ಕಡಿತಗೊಳಿಸಬಹುದು. ಆದರೆ, ಒಟ್ಟಾರೆಯಾಗಿ ಆಟದ ಮೈದಾನ ಹಾಗೂ ಉದ್ಯಾನವನ ಹಾಗೂ ಬಯಲುಜಾಗ ಮತ್ತು ನಾಗರೀಕ ಸೌಲಭ್ಯ ಉದ್ದೇಶಕ್ಕಾಗಿ ಕಾಯ್ದಿರಿಸಿರುವ ವಿಸ್ತೀರ್ಣವು ಒಟ್ಟಾರೆ ಸ್ವತ್ತಿನ ವಿಸ್ತೀರ್ಣದ ಶೇಕಡ 10 ಕ್ಕಿಂತ ಕಡಿಮೆ ಇರಕೂಡದು.

6.5 ಅನಿವಾರ್ಯ ಸಂದರ್ಭದಲ್ಲಿ ಒಟ್ಟಾರೆ ಸ್ವತ್ತಿನ ವಿಸ್ತೀರ್ಣದ ಶೇಕಡ 40ಕ್ಕಿಂತ ಹೆಚ್ಚಾಗಿ ರಸ್ತೆ ವಿಸ್ತೀರ್ಣ ಬಂದಲ್ಲಿ ವಸತಿ ಉದ್ದೇಶಕ್ಕಾಗಿ ಕಾಯ್ದಿರಿಸಬೇಕಾದ ವಿಸ್ತೀರ್ಣ ಶೇ.50ಕ್ಕಿಂತ ಕಡಿಮೆಯಾಗದಂತೆ ಕಾಯ್ದಿರಿಸಿ ಅದಕ್ಕೆ ಅನುಸಾರವಾಗಿ ಆಟದ ಮೈದಾನ / ಉದ್ಯಾನವನ ಮತ್ತು ಬಯಲು ಜಾಗ ಅಥವಾ ನಾಗರೀಕ ಸೌಲಭ್ಯ ಉದ್ದೇಶಕ್ಕಾಗಿ ಕಾಯ್ದಿರಿಸಬೇಕಾಗಿರುವುದನ್ನು ಕಡಿತಗೊಳಿಸಬಹುದು. ಹಾಗೂ ಅಂತಹ ಸಂದರ್ಭದಲ್ಲಿ ವಸತಿ ಉದ್ದೇಶಕ್ಕಾಗಿ ಅನುಮತಿಸಬಹುದಾದ ವಿಸ್ತೀರ್ಣವು ಗರಿಷ್ಠ 55 ಕ್ಕೆ ಮಿತಿಗೊಳಿಸತಕ್ಕದ್ದು.

6.6 ವಿನ್ಯಾಸದಲ್ಲಿನ ರಸ್ತೆಗಳಿಂದ ಅಕ್ಕ ಪಕ್ಕದ ಜಮೀನುಗಳಿಗೆ ಇರುವ ಸಂಪರ್ಕವನ್ನು ಯಾವುದೇ ಕಾರಣಕ್ಕೂ ನಿರ್ಬಂಧಿಸತಕ್ಕದ್ದಲ್ಲ.

7. ಒಂದು ಎಕರೆಗಿಂತ ಕಡಿಮೆ ಇರುವ ಹಾಗೂ ವಿಸ್ತೀರ್ಣ ಮಿತಿ ಇಲ್ಲದೆ ಬಹು ನಿವೇಶನ ವಸತಿ ವಿನ್ಯಾಸ ಅನುಮೋದನೆ ಸಮಯದಲ್ಲಿ ವಿಧಿಸಬೇಕಾದ ಷರತ್ತುಗಳು

7.1 ವಿನ್ಯಾಸ ಕಾರ್ಯಗತಗೊಳಿಸುವ ಮೊದಲು ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ / ತಾಲ್ಲೂಕು ಪಂಚಾಯತಿಯಿಂದ ಅಗತ್ಯ ಅನುಮತಿ ಪಡೆಯಬೇಕು.

7.2 ಅಭಿವೃದ್ಧಿ ಶುಲ್ಕವನ್ನು ಅಂದಾಜು ಪಟ್ಟಿಯಂತೆ ಹಾಗೂ ಇತರೆ ಶುಲ್ಕಗಳನ್ನು ಕಾನೂನು ಪ್ರಕಾರ ಹಾಗೂ ಸರ್ಕಾರಿ ಆದೇಶಗಳನ್ವಯ ಸಂಬಂಧಪಟ್ಟ ಗ್ರಾಮ ಪಂಚಾಯತಿಗೆ ಮುಂಗಡವಾಗಿ ಸಂದಾಯ ಮಾಡಬೇಕು.

7.3 ಅನುಮೋದಿತ ವಿನ್ಯಾಸದಲ್ಲಿರುವಂತೆಯೇ ನಿವೇಶನಗಳನ್ನು, ರಸ್ತೆಗಳು ಮತ್ತಿತರ ಸಾರ್ವಜನಿಕ ಉದ್ದೇಶದ ಪ್ರದೇಶಗಳನ್ನು ಅಭಿವೃದ್ಧಿಪಡಿಸಬೇಕು.

7.4 ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ಪೂರ್ವಾನುಮತಿಯಿಲ್ಲದೆ ವಿನ್ಯಾಸದಲ್ಲಿ ಯಾವುದೇ ಬದಲಾವಣೆಯನ್ನು ಮಾಡಬಾರದು.

7.5 ವಿನ್ಯಾಸ ಪ್ರದೇಶದಲ್ಲಿ ಹಾಲಿ ಇರತಕ್ಕ ಗಿಡಮರಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಉಳಿಸಿಕೊಳ್ಳತಕ್ಕದ್ದು, ಮತ್ತು ರಸ್ತೆ ಎರಡು ಕಡೆ ಹಾಗೂ ಉದ್ಯಾನವನದಲ್ಲಿ ಹೊಸ ಸಸಿಗಳನ್ನು ಬೆಳೆಸಲು ಸೂಕ್ತ ಕ್ರಮ ಕೈಗೊಳ್ಳಬೇಕು.

7.6 ಅನುಮೋದಿತ ವಸತಿ ವಿನ್ಯಾಸದಲ್ಲಿರುವ ರಸ್ತೆಗಳು, ಆಟದ ಮೈದಾನ ಮತ್ತು ಉದ್ಯಾನವನ ಮತ್ತಿತರ ಸಾರ್ವಜನಿಕ ಸೌಲಭ್ಯಕ್ಕಾಗಿ ಕಾಯ್ದಿರಿಸಿರುವ ಪ್ರದೇಶಗಳನ್ನು ಅರ್ಜಿದಾರರು / ಅಭಿವೃದ್ಧಿದಾರರು ಯಾವ ಪರಿಹಾರವನ್ನು ಕೋರದೆ ಪುಕ್ಕಟೆಯಾಗಿ ನೋಂದಾಯಿತ ಪರಿತ್ಯಜನ ಪತ್ರದ ಮೂಲಕ ~~-----------~~ ಗ್ರಾಮಪಂಚಾಯತಿಗೆ ವಹಿಸಿಕೊಡತಕ್ಕದ್ದು.

7.7 ವಿನ್ಯಾಸವನ್ನು ಪೂರ್ಣವಾಗಿ ಅಭಿವೃದ್ಧಿಪಡಿಸಿದ ನಂತರವೇ ಸಂಬಂಧಪಟ್ಟ ಗ್ರಾಮ ಪಂಚಾಯತಿ ಕಟ್ಟಡ ನಿರ್ಮಾಣಕ್ಕೆ ಅನುಮತಿ ನೀಡತಕ್ಕದ್ದು.

7.8 ಅಭಿವೃದ್ಧಿ ಕಾಮಗಾರಿಗಳು ಮುಗಿದ ನಂತರ ಸಂಬಂಧಪಟ್ಟ ಗ್ರಾಮ ಪಂಚಾಯ್ತಿಯಿಂದ ಕಾಮಗಾರಿ ಮುಕ್ತಾಯ ಪ್ರಮಾಣ ಪತ್ರ ಪಡೆಯಬೇಕು.

7.9 ಈ ವಿನ್ಯಾಸದಲ್ಲಿ ಕಟ್ಟಡ ಕಟ್ಟುವ ಮೊದಲು ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಅನುಮತಿ ಪತ್ರ ಪಡೆಯತಕ್ಕದ್ದು.

7.10 ನಿವೇಶನ ಬಿಡುಗಡೆಯನ್ನು ಮೊದಲನೇ ಹಂತವಾಗಿ ಶೇ.60 ರಷ್ಟು ಹಾಗೂ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಅರ್ಜಿದಾರರು / ಅಭಿವೃದ್ಧಿದಾರರು ಒದಗಿಸಿದ ನಂತರ ಉಳಿಕೆ ಶೇ.40 ರಷ್ಟು ನಿವೇಶನಗಳನ್ನು ಬಿಡುಗಡೆ ಮಾಡತಕ್ಕದ್ದು.

7.11 ಅನುಮೋದಿತ ವಿನ್ಯಾಸದ ಸೂಕ್ತ ಸ್ಥಳಗಳಲ್ಲಿ ನೀರು ಇಂಗುಗುಳಿ **(Water Recharge)** ಮತ್ತು ಮಳೆನೀರು ಸಂಗ್ರಹಣೆ (Rain water harwesting pits) ಗಳನ್ನು ಗುರ್ತಿಸಿ ವಿನ್ಯಾಸದಲ್ಲಿ ಮಳೆ ನೀರು ಸಂಗ್ರಹಣೆ ಪದ್ಧತಿಯನ್ನು ಕಡ್ಡಾಯವಾಗಿ ಅಳವಡಿಸಿ ಅಂತರ್ಜಲವೃದ್ಧಿಗೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು.

7.12 ವಿನ್ಯಾಸದಲ್ಲಿನ ರಸ್ತೆಗಳಿಂದ ಅಕ್ಕ ಪಕ್ಕದ ಜಮೀನುಗಳಿಗೆ ಇರುವ ಸಂಪರ್ಕವನ್ನು ಯಾವುದೇ ಕಾರಣಕ್ಕೂ ನಿರ್ಬಂಧಿಸತಕ್ಕದ್ದಲ್ಲ.

7.13 ವಿನ್ಯಾಸ ಅಂಗೀಕಾರ ಸಂಬಂಧ ಇತರೆ ಯಾವುದೇ ಇಲಾಖೆಯಿಂದ ನಿರಾಕ್ಷೇಪಣಾ ಪತ್ರ ಪಡೆಯಬೇಕಾಗಿದ್ದಲ್ಲಿ ಅಂತಹ ನಿರಾಕ್ಷೇಪಣಾ ಪತ್ರವನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

7.14 ನೈಸರ್ಗಿಕವಾಗಿ ಹರಿಯುವ ನದಿ / ಹಳ್ಳ ಅಥವಾ ಕೆರೆ ಮುಂತಾದವುಗಳಿಗೆ ಬಡಾವಣೆಯ ಯಾವುದೇ ಮಲಿನ ನೀರನ್ನು ಹರಿಯಬಿಡಬಾರದು.

7.15 ಈ ಅನುಮೋದಿತ ವಸತಿ ಬಡಾವಣೆಯಲ್ಲಿ ನಕ್ಷೆ ಪ್ರದೇಶದಲ್ಲಿ ಬರುವ 'ಬಿ' ಖರಾಬು ಜಮೀನುಗಳು ಸರ್ಕಾರಕ್ಕೆ ಸೇರಿರುತ್ತದೆ. ಈ ಜಮೀನುಗಳನ್ನು ಯಥಾ ಸ್ಥಿತಿಯಂತೆ ಕಾಪಾಡತಕ್ಕದ್ದು, ಹಾಗೂ ಅತಿಕ್ರಮಣ ಮಾಡಬಾರದು ಹಾಗೂ ಇತರೆ ಉದ್ದೇಶಗಳಿಗಾಗಿ ಉಪಯೋಗಿಸತಕ್ಕದ್ದಲ್ಲ.

7.16 ಅನುಮೋದಿತ ಬಡಾವಣೆಯಲ್ಲಿ ಕೊಳವೆ ಬಾವಿಯನ್ನು ಕೊರೆಯುವಾಗ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದಂತೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯತಕ್ಕದ್ದು ಹಾಗೂ ತೆರೆದ ಕೊಳವೆ ಬಾವಿಯ ಬಗ್ಗೆ ಭೂ ಮಾಲೀಕರುಗಳು ಮತ್ತು ಸ್ಥಳೀಯ ಸಂಸ್ಥೆಗಳು ಸಂರಕ್ಷಣೆ ಮಾಡಲು ದಿ: 31-12-2012 ಮತ್ತು ದಿನಾಂಕ : 06-08-2014 ರಂದು ಸರ್ಕಾರವು ನೀಡಿರುವ ನಿರ್ದೇಶನಗಳಂತೆ ತಪ್ಪದೇ ಕ್ರಮ ವಹಿಸತಕ್ಕದ್ದು.

7.17 ಸದರಿ ಬಡಾವಣೆಯಲ್ಲಿ ಸುತ್ತಲೂ ಕಾಂಪೌಡ್ ನಿರ್ಮಿಸಿ, ಗೇಟನ್ನು ಅಳವಡಿಸಿ "ಗೇಟೆಡ್ ಕಮ್ಯುನಿಟಿ" ಎಂಬ ಹೆಸರಿನಲ್ಲಿ ನಿವೇಶನಗಳನ್ನು ಮಾರಾಟ ಮಾಡುವುದನ್ನು ನಿಷೇಧಿಸಲಾಗಿದೆ. ಹಾಗೂ ಸದರಿ ಬಡಾವಣೆಯಲ್ಲಿನ ರಸ್ತೆ, ಆಟದ

ಮೈದಾನ / ಉದ್ಯಾನವನ / ಬಯಲುಜಾಗಗಳು ಸಾರ್ವಜನಿಕ ಸ್ವತ್ತಾಗಿರುತ್ತವೆ. ಆದ್ದರಿಂದ, ಸಾರ್ವಜನಿಕ ಸ್ವತ್ತುಗಳನ್ನು ಮುಕ್ತವಾಗಿಡತಕ್ಕದ್ದು.

7.18 ಈ ಅನುಮೋದಿತ ವಿನ್ಯಾಸ ನಕ್ಷೆಯು ನಿಗಧಿಪಡಿಸಲಾದ ಮಾಪನ (ಸ್ಕೇಲ್) ದಲ್ಲಿ ವ್ಯತ್ಯಾಸ ಇರುವುದು ಕಂಡುಬಂದಲ್ಲಿ ಅದನ್ನು ಸೂಕ್ತವಾಗಿ ಸ್ಥಳದ ವಸ್ತು ಸ್ಥಿತಿ ಹಾಗೂ ಅಳತೆ ಪರಿಮಾಣಕ್ಕೆ ಅನುಗುಣವಾಗಿ ಪರಿಷ್ಕೃತ ವಿನ್ಯಾಸಕ್ಕೆ ಅನುಮೋದನೆ ಪಡೆದುಕೊಳ್ಳತಕ್ಕದ್ದು.

7.19 ಈ ಅನುಮೋದನೆಯು ಜಮೀನಿನ ಮೇಲಿರುವ ಹಕ್ಕನ್ನು ಅಥವಾ ಮಾಲೀಕತ್ವವನ್ನು ನಿರೂಪಿಸುವುದಕ್ಕೆ ಉಪಯೋಗಿಸಲು ಬರುವುದಿಲ್ಲ.

7.20 ವಿನ್ಯಾಸ ಅಂಗೀಕಾರ ಕೋರಿಕೆ ಸಂಬಂಧ ಸಲ್ಲಿಸಲಾಗಿರುವ ದಾಖಲೆ ಅಥವಾ ಬೇರೆ ಯಾವುದೇ ಮಾಹಿತಿಯು ತಪ್ಪಾಗಿದ್ದಲ್ಲಿ ವಿನ್ಯಾಸಕ್ಕೆ ನೀಡಿರುವ ಅಂಗೀಕಾರ ತಾನಾಗಿ ರದ್ದುಗೊಳ್ಳುತ್ತದೆ. ಹಾಗೂ ಒಟ್ಟಾರೆ ಪ್ರಸ್ತಾವನೆಗೆ ಸಂಬಂಧಿಸಿದಂತೆ ಯಾವುದೇ ಸಿವಿಲ್ ವ್ಯಾಜ್ಯಗಳಿಗೆ ಈ ಸ್ಥಳೀಯ ಸಂಸ್ಥೆ ಅಥವಾ ಸಂಬಂಧಿಸಿದ ಸರ್ಕಾರಿ ಕಛೇರಿಯು ಜವಾಬ್ದಾರಿಯಾಗಿರುವುದಿಲ್ಲ.

8. <u>ವಿಸ್ತೀರ್ಣ ಮಿತಿಯಿಲ್ಲದೇ ಏಕ ನಿವೇಶನದ ವಸತಿ ವಿನ್ಯಾಸಗಳಲ್ಲಿರಬೇಕಾದ ಅಂಶಗಳು .</u>

~~8.1 ವಿಸ್ತೀರ್ಣ ಮಿತಿಯಿಲ್ಲದೇ ಏಕ ನಿವೇಶನ ವಸತಿ ವಿನ್ಯಾಸ ಅನುಮೋದಿಸುವಾಗ ಪ್ರಶ್ನಿತ ಜಮೀನಿಗೆ~~ ಸಾರ್ವಜನಿಕ ರಸ್ತೆ ಸಂಪರ್ಕ ಇರುವುದನ್ನು ಖಚಿತಪಡಿಸಿಕೊಂಡು ವಿನ್ಯಾಸ ಅನುಮೋದನೆ ನೀಡಲು ಪರಿಗಣಿಸತಕ್ಕದ್ದು. ಹಾಗೂ <u>ಅಂತಹ ವಸತಿ ವಿನ್ಯಾಸಗಳಿಗೆ ಅನುಮೋದನೆ ನೀಡುವಾಗ ಯಾವುದೇ ಆಟದ ಮೈದಾನ ಹಾಗೂ ಉದ್ಯಾನವನ ಮತ್ತು ಬಯಲುಜಾಗ ಹಾಗೂ ನಾಗರೀಕ ಸೌಲಭ್ಯ ನಿವೇಶನಗಳನ್ನು ಕಾಯ್ದಿರಿಸದೇ ವಿನ್ಯಾಸ ನಕ್ಷೆಗೆ ಅನುಮೋದನೆ ನೀಡಲು ಪರಿಗಣಿಸತಕ್ಕದ್ದು.</u>

8.2 ಅನಿವಾರ್ಯ ಸಂದರ್ಭದಲ್ಲಿ ಸಾರ್ವಜನಿಕ ರಸ್ತೆಗಳು, ಗ್ರಾಮನಕ್ಷೆಯಲ್ಲಿರುವಂತೆ ಬಂಡಿದಾರಿ ಹಾಗೂ ಇತರೆ ಸರ್ಕಾರಿ ರಸ್ತೆಗಳು ಉದ್ದೇಶಿತ ಜಮೀನಿನಲ್ಲಿ ಹಾದು ಹೋಗುತ್ತಿದ್ದಲ್ಲಿ, ಜಮೀನಿನ ವಿಭಜನೆ ತಾನೇ ತಾನಾಗಿ ಆಗುತ್ತಿದ್ದು, (Natural Bifurcation) ಅಂತಹ ಸಂದರ್ಭಗಳಲ್ಲಿ ವಸತಿ ವಿನ್ಯಾಸ ಅನುಮೋದನೆ ನೀಡುವಾಗ ಯಾವುದೇ ಆಟದ ಮೈದಾನ ಮತ್ತು ಉದ್ಯಾನವನ ಮತ್ತು ಬಯಲುಜಾಗ ಹಾಗೂ ನಾಗರೀಕ ಸೌಲಭ್ಯ ನಿವೇಶನಗಳನ್ನು ಕಾಯ್ದಿರಿಸದೇ ವಿನ್ಯಾಸ ನಕ್ಷೆಗೆ ಅನುಮೋದನೆ ನೀಡಲು ಪರಿಗಣಿಸತಕ್ಕದ್ದು. ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಯಾವುದಾದರೂ ರಸ್ತೆಗಳನ್ನು ಮುಂದುವರಿಸಬೇಕಾದಲ್ಲಿ ಸಹ, ರಸ್ತೆಗಳನ್ನು ಅಳವಡಿಸಿಕೊಂಡು ವಿನ್ಯಾಸ ನಕ್ಷೆಗೆ ಅನುಮೋದನೆ ನೀಡಲು ಪರಿಗಣಿಸತಕ್ಕದ್ದು.

9. <u>ವಿಸ್ತೀರ್ಣದ ಮಿತಿಯಿಲ್ಲದೇ ಏಕ ನಿವೇಶನದ ವಸತಿ ವಿನ್ಯಾಸಗಳ ಅನುಮೋದನೆ ಸಮಯದಲ್ಲಿ ವಿಧಿಸಬೇಕಾದ ಷರತ್ತುಗಳು</u>

9.1 ವಿನ್ಯಾಸ ಕಾರ್ಯಗತಗೊಳಿಸುವ ಮೊದಲು ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಅಗತ್ಯ ಅನುಮತಿ ಪಡೆಯಬೇಕು.

9.2 ಅಭಿವೃದ್ಧಿ ಶುಲ್ಕವನ್ನು ಅಂದಾಜು ಪಟ್ಟಿಯಂತೆ ಹಾಗೂ ಇತರೆ ಶುಲ್ಕಗಳನ್ನು ಕಾನೂನು ಪ್ರಕಾರ ಹಾಗೂ ಸರ್ಕಾರಿ ಆದೇಶಗಳನ್ವಯ ಸಂಬಂಧಪಟ್ಟ ಗ್ರಾಮ ಪಂಚಾಯತಿಗೆ ಮುಂಗಡವಾಗಿ ಕಟ್ಟತಕ್ಕದ್ದು.

9.3 ಪ್ರಶ್ನಿತ ಜಮೀನಿನ ಮಾಲೀಕರು ಜಮೀನನ್ನು ನಂತರ ವಿಭಜಿಸಲು ಇಚ್ಛಿಸಿದಲ್ಲಿ ನಿಯಮಾವಳಿಯಂತೆ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಕಛೇರಿಯಿಂದ ತಾಂತ್ರಿಕ ಅನುಮೋದನೆಯನ್ನು ಪೂರ್ವಭಾವಿಯಾಗಿ ಪಡೆಯತಕ್ಕದ್ದು.

9.4 ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ಪೂರ್ವಾನುಮತಿಯಿಲ್ಲದೆ ವಿನ್ಯಾಸದಲ್ಲಿ ಯಾವುದೇ ಬದಲಾವಣೆಯನ್ನು ಮಾಡಬಾರದು.

9.5 ವಿನ್ಯಾಸ ಪ್ರದೇಶದಲ್ಲಿ ಹಾಲಿ ಇರತಕ್ಕ ಗಿಡಮರಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಉಳಿಸಿಕೊಳ್ಳತಕ್ಕದ್ದು, ಮತ್ತು ರಸ್ತೆ ಎರಡು ಕಡೆ ಹಾಗೂ ಉದ್ಯಾನವನದಲ್ಲಿ ಹೊಸ ಸಸಿಗಳನ್ನು ಬೆಳೆಸಲು ಸೂಕ್ತ ಕ್ರಮ ಕೈಗೊಳ್ಳಬೇಕು.

9.6 ವಿನ್ಯಾಸವನ್ನು ಪೂರ್ಣವಾಗಿ ಅಭಿವೃದ್ಧಿಪಡಿಸಿದ ನಂತರವೇ ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಕಟ್ಟಡ ನಿರ್ಮಾಣಕ್ಕೆ ಅನುಮತಿ ನೀಡತಕ್ಕದ್ದು.

9.7 ಅಭಿವೃದ್ಧಿ ಕಾಮಗಾರಿಗಳು ಮುಗಿದ ನಂತರ ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಕಾಮಗಾರಿ ಮುಕ್ತಾಯ ಪ್ರಮಾಣ ಪತ್ರ ಪಡೆಯಬೇಕು.

9.8 ಈ ವಿನ್ಯಾಸದಲ್ಲಿ ಕಟ್ಟಡ ಕಟ್ಟುವ ಮೊದಲು ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಅನುಮತಿ ಪತ್ರ ಪಡೆಯತಕ್ಕದ್ದು.

9.9 ಅನುಮೋದಿತ ವಿನ್ಯಾಸದ ಸೂಕ್ತ ಸ್ಥಳಗಳಲ್ಲಿ ನೀರು ಇಂಗುಗುಳಿ (Water Recharge) ಮತ್ತು ಮಳೆನೀರು ಸಂಗ್ರಹಣೆ (Rain Water harvesting Pits) ಗಳನ್ನು ನಿರ್ಮಿಸಿ ವಿನ್ಯಾಸದಲ್ಲಿ ಮಳೆ ನೀರು ಸಂಗ್ರಹಣೆ ಪದ್ಧತಿಯನ್ನು ಕಡ್ಡಾಯವಾಗಿ ಅಳವಡಿಸಿ ಅಂತರ್ಜಲವೃದ್ಧಿಗೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು.

9.10 ವಿನ್ಯಾಸದಲ್ಲಿನ ರಸ್ತೆಗಳಿಂದ ಅಕ್ಕ ಪಕ್ಕದ ಜಮೀನುಗಳಿಗೆ ಇರುವ ಸಂಪರ್ಕವನ್ನು ಯಾವುದೇ ಕಾರಣಕ್ಕೂ ನಿರ್ಬಂಧಿಸತಕ್ಕದ್ದಲ್ಲ.

9.11 ವಿನ್ಯಾಸ ಅಂಗೀಕಾರ ಸಂಬಂಧ ಇತರೆ ಯಾವುದೇ ಇಲಾಖೆಯಿಂದ ನಿರಾಕ್ಷೇಪಣಾ ಪತ್ರ ಪಡೆಯಬೇಕಾಗಿದ್ದಲ್ಲಿ ಕಡ್ಡಾಯವಾಗಿ ಪಡೆಯತಕ್ಕದ್ದು.

9.12 ನೈಸರ್ಗಿಕವಾಗಿ ಹರಿಯುವ ನದಿ/ಹಳ್ಳ ಹಾಗೂ ಕೆರೆ ಮುಂತಾದವುಗಳಿಗೆ ಬಡಾವಣೆಯ ಯಾವುದೇ ಮಲಿನ ನೀರನ್ನು ಹರಿಯಬಿಡಬಾರದು.

9.13 ಈ ಅನುಮೋದಿತ ವಸತಿ ಪ್ರದೇಶದಲ್ಲಿ ಬರುವ 'ಬಿ' ಖರಾಬು ಜಮೀನುಗಳು ಸರ್ಕಾರಕ್ಕೆ ಸೇರಿರುತ್ತದೆ. ಈ ಜಮೀನುಗಳನ್ನು ಯಥಾ ಸ್ಥಿತಿಯಂತೆ ಕಾಪಾಡತಕ್ಕದ್ದು. ಹಾಗೂ ಅತಿಕ್ರಮಣ ಮಾಡಬಾರದು ಹಾಗೂ ಇತರೆ ಉದ್ದೇಶಗಳಿಗಾಗಿ ಉಪಯೋಗಿಸತಕ್ಕದ್ದಲ್ಲ.

9.14 ಅನುಮೋದಿತ ಬಡಾವಣೆಯಲ್ಲಿ ಕೊಳವೆ ಬಾವಿಯನ್ನು ಕೊರೆಯುವಾಗ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದಂತೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯತಕ್ಕದ್ದು ಹಾಗೂ ತೆರೆದ ಕೊಳವೆ ಬಾವಿಯ ಬಗ್ಗೆ ಭೂ ಮಾಲೀಕರುಗಳು ಮತ್ತು ಸ್ಥಳೀಯ ಸಂಸ್ಥೆಗಳು ಸಂರಕ್ಷಣೆ ಮಾಡಲು ದಿ: 31-12-2012 ಮತ್ತು ದಿನಾಂಕ :06-08-2014 ರಂದು ಸರ್ಕಾರವು ನೀಡಿರುವ ನಿರ್ದೇಶನಗಳಂತೆ ತಪ್ಪದೇ ಕ್ರಮ ವಹಿಸತಕ್ಕದ್ದು.

9.15 ಈ ಅನುಮೋದನೆಯು ಜಮೀನಿನ ಮೇಲಿರುವ ಹಕ್ಕನ್ನು ಅಥವಾ ಮಾಲೀಕತ್ವವನ್ನು ನಿರೂಪಿಸುವುದಕ್ಕೆ ಉಪಯೋಗಿಸಲು ಬರುವುದಿಲ್ಲ.

9.16 ವಿನ್ಯಾಸ ಅಂಗೀಕಾರ ಕೋರಿಕೆ ಸಂಬಂಧ ಸಲ್ಲಿಸಲಾಗಿರುವ ದಾಖಲೆ ಅಥವಾ ಬೇರೆ ಯಾವುದೇ ಮಾಹಿತಿಯು ತಪ್ಪಾಗಿದ್ದಲ್ಲಿ ವಿನ್ಯಾಸಕ್ಕೆ ನೀಡಿರುವ ಅಂಗೀಕಾರ ತಾನಾಗಿ ರದ್ದುಗೊಳ್ಳುತ್ತದೆ. ಹಾಗೂ ಒಟ್ಟಾರೆ ಪ್ರಸ್ತಾವನೆಗೆ ಸಂಬಂಧಿಸಿದಂತೆ ಯಾವುದೇ ಸಿವಿಲ್ ವ್ಯಾಜ್ಯಗಳಿಗೆ ತಾಲ್ಲೂಕು / ಗ್ರಾಮ ಪಂಚಾಯತಿಯಾಗಲಿ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಕಛೇರಿಯಾಗಲಿ ಜವಾಬ್ದಾರಿಯಾಗಿರುವುದಿಲ್ಲ.

**10. ಒಂದು ಎಕರೆಗಿಂತ ಕಡಿಮೆ ಇರುವ ಹಾಗೂ ವಿಸ್ತೀರ್ಣ ಮಿತಿ ಇಲ್ಲದೇ ಬಹು ನಿವೇಶನ ವಸತಿಯೇತರ ವಿನ್ಯಾಸಗಳಲ್ಲಿರಬೇಕಾದ ಅಂಶಗಳು**

10.1 ಬಹುನಿವೇಶನ ವಸತಿಯೇತರ ವಿನ್ಯಾಸ ಅನುಮೋದನೆ ನೀಡುವಾಗ ವಿನ್ಯಾಸದ ಒಟ್ಟು ವಿಸ್ತೀರ್ಣದ ಶೇ.5 ರಷ್ಟು ವಾಹನ ನಿಲುಗಡೆಗಾಗಿ ಹಾಗೂ ಶೇ.10 ರಷ್ಟನ್ನು ಆಟದ ಮೈದಾನ, ಉದ್ಯಾನವನ ಮತ್ತು ಬಯಲು ಜಾಗಕ್ಕೆ ಕಾಯ್ದಿರಿಸತಕ್ಕದ್ದು.

10.2 ವಿನ್ಯಾಸದಲ್ಲಿನ ಆಂತರಿಕ ರಸ್ತೆಗಳ ಅಗಲವು 12ಮೀ ಗಿಂತ ಕಡಿಮೆ ಇರಬಾರದು.

11. ಒಂದು ಎಕರೆಗಿಂತ ಕಡಿಮೆ ಇರುವ ಹಾಗೂ ವಿಸ್ತೀರ್ಣದ ಮಿತಿಯಿಲ್ಲದೇ ಬಹು ನಿವೇಶನದ ವಸತಿಯೇತರ ವಿನ್ಯಾಸಗಳ ಅನುಮೋದನೆ ಸಮಯದಲ್ಲಿ ವಿಧಿಸಬೇಕಾದ ಷರತ್ತುಗಳು

11.1 ವಿನ್ಯಾಸ ಕಾರ್ಯಗತಗೊಳಿಸುವ ಮೊದಲು ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಅಗತ್ಯ ಅನುಮತಿ ಪಡೆಯಬೇಕು.

11.2 ಅಭಿವೃದ್ಧಿ ಶುಲ್ಕವನ್ನು ಅಂದಾಜು ಪಟ್ಟಿಯಂತೆ ಹಾಗೂ ಇತರೆ ಶುಲ್ಕಗಳನ್ನು ಕಾನೂನು ಪ್ರಕಾರ ಹಾಗೂ ಸರ್ಕಾರಿ ಆದೇಶಗಳನ್ವಯ ಸಂಬಂಧಪಟ್ಟ ಗ್ರಾಮ ಪಂಚಾಯತಿಗೆ ಮುಂಗಡವಾಗಿ ಕಟ್ಟತಕ್ಕದ್ದು.

11.3 ಅನುಮೋದಿತ ವಿನ್ಯಾಸದಲ್ಲಿರುವಂತೆಯೇ ನಿವೇಶನಗಳನ್ನು, ರಸ್ತೆಗಳು ಮತ್ತಿತರ ಸಾರ್ವಜನಿಕ ಉದ್ದೇಶದ ಪ್ರದೇಶಗಳನ್ನು ಅಭಿವೃದ್ಧಿಪಡಿಸಬೇಕು.

11.4 ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯಿಂದ ಪೂರ್ವಾನುಮತಿಯಿಲ್ಲದೆ ವಿನ್ಯಾಸದಲ್ಲಿ ಯಾವುದೇ ಬದಲಾವಣೆಯನ್ನು ಮಾಡಬಾರದು.

11.5 ವಿನ್ಯಾಸ ಪ್ರದೇಶದಲ್ಲಿ ಹಾಲಿ ಇರತಕ್ಕ ಗಿಡಮರಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಉಳಿಸಿಕೊಳ್ಳತಕ್ಕದ್ದು. ಮತ್ತು ರಸ್ತೆ ಎರಡು ಕಡೆ ಹಾಗೂ ಉದ್ಯಾನವನದಲ್ಲಿ ಹೊಸ ಸಸಿಗಳನ್ನು ಬೆಳೆಸಲು ಸೂಕ್ತ ಕ್ರಮ ಕೈಗೊಳ್ಳಬೇಕು.

11.6 ಅನುಮೋದಿತ ವಸತಿ ವಿನ್ಯಾಸದಲ್ಲಿರುವ ರಸ್ತೆಗಳು, ಆಟದ ಮೈದಾನ, ಉದ್ಯಾನವನ ಮತ್ತು ಬಯಲುಜಾಗಕ್ಕಾಗಿ ಹಾಗೂ ವಾಹನ ನಿಲುಗಡೆಗಾಗಿ (Parking) ಕಾಯ್ದಿರಿಸಿರುವ ಪ್ರದೇಶಗಳನ್ನು ಅರ್ಜಿದಾರರು / ಅಭಿವೃದ್ಧಿದಾರರು ಯಾವ ಪರಿಹಾರವನ್ನು ನೀಡದೆ ಪುಕ್ಕಟೆಯಾಗಿ ನೋಂದಾಯಿತ ಪರಿತ್ಯಜನಾ ಪತ್ರದ ಮೂಲಕ ———— ಗ್ರಾಮ ಪಂಚಾಯತಿಗೆ ವಹಿಸಿಕೊಳ್ಳತಕ್ಕದ್ದು.

11.7 ವಿನ್ಯಾಸವನ್ನು ಪೂರ್ಣವಾಗಿ ಅಭಿವೃದ್ಧಿಪಡಿಸಿದ ನಂತರವೇ ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಕಟ್ಟಡ ನಿರ್ಮಾಣಕ್ಕೆ ಅನುಮತಿ ನೀಡತಕ್ಕದ್ದು.

11.8 ಅಭಿವೃದ್ಧಿ ಕಾಮಗಾರಿಗಳು ಮುಗಿದ ನಂತರ ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಕಾಮಗಾರಿ ಮುಕ್ತಾಯ ಪ್ರಮಾಣ ಪತ್ರ ಪಡೆಯಬೇಕು.

11.9 ಈ ವಿನ್ಯಾಸದಲ್ಲಿ ಕಟ್ಟಡ ಕಟ್ಟುವ ಮೊದಲು ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಅನುಮತಿ ಪತ್ರ ಪಡೆಯತಕ್ಕದ್ದು.

11.10 ನಿವೇಶನ ಬಿಡುಗಡೆಯನ್ನು ಮೊದಲನೇ ಹಂತವಾಗಿ ಶೇ.60 ರಷ್ಟು ಹಾಗೂ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಅರ್ಜಿದಾರರು / ಅಭಿವೃದ್ಧಿದಾರರು ಒದಗಿಸಿದ ನಂತರ ಉಳಿಕೆ ಶೇ.40 ರಷ್ಟು ನಿವೇಶನಗಳನ್ನು ಬಿಡುಗಡೆ ಮಾಡತಕ್ಕದ್ದು.

11.11 ಅನುಮೋದಿತ ವಿನ್ಯಾಸದ ಸೂಕ್ತ ಸ್ಥಳಗಳಲ್ಲಿ ನೀರು ಇಂಗುಗುಳಿ (Water Recharge) ಮತ್ತು ಮಳೆ ನೀರು ಸಂಗ್ರಹಣೆ (Rain Water Harvesting Pits ) ಗಳನ್ನು ನಿರ್ಮಿಸಿ ವಿನ್ಯಾಸದಲ್ಲಿ ಮಳೆ ನೀರು ಸಂಗ್ರಹಣೆ ಪದ್ಧತಿಯನ್ನು ಕಡ್ಡಾಯವಾಗಿ ಅಳವಡಿಸಿ ಅಂತರ್ ಜಲವೃದ್ಧಿಗೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು.

11.12 ವಿನ್ಯಾಸದಲ್ಲಿನ ರಸ್ತೆಗಳಿಂದ ಅಕ್ಕ ಪಕ್ಕದ ಜಮೀನುಗಳಿಗೆ ಇರುವ ಸಂಪರ್ಕವನ್ನು ಯಾವುದೇ ಕಾರಣಕ್ಕೂ ನಿರ್ಬಂಧಿಸತಕ್ಕದ್ದಲ್ಲ.

11.13 ವಿನ್ಯಾಸ ಅಂಗೀಕಾರ ಸಂಬಂಧ ಇತರೆ ಯಾವುದೇ ಇಲಾಖೆಯಿಂದ ನಿರಾಕ್ಷೇಪಣಾ ಪತ್ರ ಪಡೆಯಬೇಕಾಗಿದ್ದಲ್ಲಿ ಕಡ್ಡಾಯವಾಗಿ ಪಡೆಯತಕ್ಕದ್ದು.

11.14 ನೈಸರ್ಗಿಕವಾಗಿ ಹರಿಯುವ ನದಿ/ಹಳ್ಳ ಹಾಗು ಕೆರೆ ಮುಂತಾದವುಗಳಿಗೆ ಬಡಾವಣೆಯ ಯಾವುದೇ ಮಲಿನ ನೀರನ್ನು ಹರಿಯಬಿಡಬಾರದು.

~~11.15 ಈ ಅನುಮೋದಿತ ವಸತಿ ವಿನ್ಯಾಸ ನಕ್ಷೆ ಪ್ರದೇಶದಲ್ಲಿ ಬರುವ 'ಬಿ' ಖರಾಬು~~ ಜಮೀನುಗಳು ಸರ್ಕಾರಕ್ಕೆ ಸೇರಿರುತ್ತದೆ. ಈ ಜಮೀನುಗಳನ್ನು ಯಥಾ ಸ್ಥಿತಿಯಂತೆ ಕಾಪಾಡತಕ್ಕದ್ದು. ಹಾಗೂ ಅತಿಕ್ರಮಣ ಮಾಡಬಾರದು ಹಾಗೂ ಇತರೆ ಉದ್ದೇಶಗಳಿಗಾಗಿ ಉಪಯೋಗಿಸತಕ್ಕದ್ದಲ್ಲ.

11.16 ಅನುಮೋದಿತ ವಿನ್ಯಾಸದಲ್ಲಿ ಕೊಳವೆ ಬಾವಿಯನ್ನು ಕೊರೆಯುವಾಗ ಸರ್ವೋಚ್ಛ ನ್ಯಾಯಾಲಯದ ನಿರ್ದೇಶನದಂತೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆಯತಕ್ಕದ್ದು. ಹಾಗೂ ತೆರೆದ ಕೊಳವೆ ಬಾವಿಯ ಬಗ್ಗೆ ಭೂ ಮಾಲೀಕರುಗಳು ಮತ್ತು ಸ್ಥಳೀಯ ಸಂಸ್ಥೆಗಳು ಸಂರಕ್ಷಣೆ ಮಾಡಲು ದಿ: 31-12-2012 ಮತ್ತು ದಿನಾಂಕ :06-08-2014 ರಂದು ಸರ್ಕಾರವು ನೀಡಿರುವ ನಿರ್ದೇಶನಗಳಂತೆ ತಪ್ಪದೇ ಕ್ರಮ ವಹಿಸತಕ್ಕದ್ದು.

11.17 ಸದರಿ ವಿನ್ಯಾಸದ ಸುತ್ತಲೂ ಕಾಂಪೌಂಡ್ ನಿರ್ಮಿಸಿ ಗೇಟನ್ನು ಅಳವಡಿಸಿ "ಗೇಟೆಡ್ ಕಮ್ಯುನಿಟಿ" ಎಂಬ ಹೆಸರಿನಲ್ಲಿ ನಿವೇಶನಗಳನ್ನು ಮಾರಾಟ ಮಾಡುವುದನ್ನು ನಿಷೇಧಿಸಲಾಗಿದೆ. ಹಾಗೂ ಸದರಿ ವಿನ್ಯಾಸದಲ್ಲಿನ ರಸ್ತೆ, ಆಟದ ಮೈದಾನ / ಉದ್ಯಾನವನ / ಬಯಲುಜಾಗಗಳು ಸಾರ್ವಜನಿಕ ಸ್ವತ್ತಾಗಿರುತ್ತದೆ. ಆದ್ದರಿಂದ, ಸಾರ್ವಜನಿಕ ಸ್ವತ್ತುಗಳನ್ನು ಮುಕ್ತವಾಗಿಡತಕ್ಕದ್ದು.

11.18 ಈ ಅನುಮೋದಿತ ವಿನ್ಯಾಸ ನಕ್ಷೆಯು ನಿಗಧಿಪಡಿಸಲಾದ ಮಾಪನ (ಸ್ಕೇಲ್) ದಲ್ಲಿ ವ್ಯತ್ಯಾಸ ಇರುವುದು ಕಂಡುಬಂದಲ್ಲಿ ಅದನ್ನು ಸೂಕ್ತವಾಗಿ ಸ್ಥಳದ ವಸ್ತು ಸ್ಥಿತಿ ಹಾಗೂ ಅಳತೆ ಪರಿಮಾಣಕ್ಕೆ ಅನುಗುಣವಾಗಿ ಪರಿಷ್ಕೃತ ವಿನ್ಯಾಸಕ್ಕೆ ಅನುಮೋದನೆ ಪಡೆದುಕೊಳ್ಳತಕ್ಕದ್ದು.

11.19 ಈ ಅನುಮೋದನೆಯು ಜಮೀನಿನ ಮೇಲಿರುವ ಹಕ್ಕನ್ನು ಅಥವಾ ಮಾಲೀಕತ್ವವನ್ನು ನಿರೂಪಿಸುವುದಕ್ಕೆ ಉಪಯೋಗಿಸಲು ಬರುವುದಿಲ್ಲ.

11.20 ವಿನ್ಯಾಸ ಅಂಗೀಕಾರ ಕೋರಿಕೆ ಸಂಬಂಧ ಸಲ್ಲಿಸಲಾಗಿರುವ ದಾಖಲೆ ಅಥವಾ ಬೇರೆ ಯಾವುದೇ ಮಾಹಿತಿಯು ತಪ್ಪಾಗಿದ್ದಲ್ಲಿ ವಿನ್ಯಾಸಕ್ಕೆ ನೀಡಿರುವ ಅಂಗೀಕಾರ ತಾನಾಗಿ ರದ್ದುಗೊಳ್ಳುತ್ತದೆ.

12. **ವಿಸ್ತೀರ್ಣ ಮಿತಿಯಿಲ್ಲದೇ ವಸತಿಯೇತರ ಏಕ ನಿವೇಶನ ವಿನ್ಯಾಸ ಅನುಮೋದಿಸುವಾಗ ಅನುಸರಿಸಬೇಕಾದ ಕ್ರಮಗಳು.**

